ಶ್ರೀರಾಮಾನುಜಾಚಾರ್ಯರವರ ಗ್ರಂಥಗಳು

# ವೇದಾಂತಸಾರ

## ಭಾಗ ೧



ಅಧ್ಯಾತ್ಮಪ್ರಕಾಶಕಾರ್ಯಾಲಯ,
ಹೊಳೆನರಸೀಪುರ.

# ವೇದಾಂತಪ್ರೇಮಿಗಳಲ್ಲಿ ವಿಜ್ಞಾಪನೆ

ಶ್ರೀಶಂಕರಾಚಾರ್ಯರವರಿಂದೀಚೆಗೆ ಹಲವು ಭಾಷ್ಯಗಳು ವೇದಾಂತದ ವಿಷಯಕ್ಕೆ ಪ್ರಕಟವಾಗಿದ್ದರೂ ಶ್ರೀರಾಮಾನುಜಾಚಾರ್ಯರವರ ಭಾಷ್ಯಗಳಷು ಪ್ರಭಾವವನ್ನು ಅವು ಯಾವವೂ ಜನರಮೇಲೆ ಬೀರಿರುವದಿಲ್ಲವೆಂದು ಧೈರ್ಯವಾಗಿ ಹೇಳಬಹುದು. ಸದ್ಯಕ್ಕೆ ದಕ್ಷಿಣದೇಶದಲ್ಲಿ ಪ್ರಚಾರದಲ್ಲಿರುವ ಶಾಂಕರೇತರ ಮತಗಳೆಂದರೆ ಶ್ರೀರಾಮಾನುಜರ ವಿಶಿಷ್ಟಾದ್ವೈತ ಮತ್ತು ಶ್ರೀಮಧ್ವಾಚಾರ್ಯರ ದ್ವೈತ– ಇವುಗಳೇ ಆಗಿವೆ. ಅವೆರಡರಲ್ಲಿ ಶ್ರೀರಾಮಾನುಜಮತಕ್ಕೇ ಹೆಚ್ಚಿನ ಪ್ರಾಶಸ್ತ್ಯವಿದೆ.

ಕನ್ನಡಭಾಷೆಯಲ್ಲಿ ಶ್ರೀರಾಮಾನುಜಾಚಾರ್ಯರ ವೇದಾಂತಗ್ರಂಥಗಳು ಈವರೆಗೂ ಸುಸಂಸ್ಕೃತವಾದ ರೂಪದಿಂದ ಹೊರಕ್ಕೆ ಬಂದಿರುವದಿಲ್ಲ; ಬಂದಿರುವ ಒಂದೆರಡು ಆಗಲೆ ವಾಚಕರಿಗೆ ದುರ್ಲಭವಾಗಿಬಿಟ್ಟವೆ.

ಶ್ರೀಶಂಕರಾಚಾರ್ಯರ ಪ್ರಸ್ಥಾನತ್ರಯಭಾಷ್ಯಗಳಂತೆಯೇ ಶ್ರೀರಾಮಾನುಜಾಚಾರ್ಯರ ಗ್ರಂಥಗಳು ಹೊರಕ್ಕೆ ಬರಬೇಕಾದದ್ದು ಅತ್ಯವಶ್ಯವಾಗಿರುತ್ತದೆ. ಬ್ರಹ್ಮಸೂತ್ರಕಾರರ ಅಭಿಪ್ರಾಯಕ್ಕೆ ಶ್ರೀಶಂಕರಾಚಾರ್ಯರ ಭಾಷ್ಯಕ್ಕಿಂತಲೂ ಶ್ರೀರಾಮಾನುಜರ ಭಾಷ್ಯವು ಹತ್ತಿರವಾಗಿರುತ್ತದೆಯೆಂತಲೂ ವಿಶಿಷ್ಟಾದ್ವೈತಕ್ಕೆ ಬಹುಪ್ರಾಚೀನವಾದ ಸಂಪ್ರದಾಯದ ಬೆಂಬಲವಿದೆಯೆಂತಲೂ ನಮ್ಮ ದೇಶದ ಮತ್ತು ಪಶ್ಚಿಮದೇಶದ ವಿದ್ವಾಂಸರುಗಳು ಅಭಿಪ್ರಾಯಪಟ್ಟಿರುತ್ತಾರೆ. ಈ ವಾದವನ್ನು ವಿಮರ್ಶೆಮಾಡಬೇಕೆನ್ನುವ ಕನ್ನಡಿಗರಿಗೂ ರಾಮಾನುಜರ ಗ್ರಂಥಗಳ ಪರಿಶೀಲನವು ಅತ್ಯವಶ್ಯವಾಗಿರುತ್ತದೆ.

ಶ್ರೀರಾಮಾನುಜರ ಗ್ರಂಥಗಳನ್ನು ವಿಮರ್ಶಾತ್ಮಕಪೀಠಿಕೆ, ಟಿಪ್ಪಣಿ–ಮುಂತಾದ ಸೌಕರ್ಯಗಳೊಡನೆ ಹೊರಕ್ಕೆ ಹಿಡಿಯಬೇಕೆನ್ನುವ ಕಾರ್ಯಾಲಯದ ಪ್ರಯತ್ನಕ್ಕೆ ತಮ್ಮೆಲ್ಲರ ಪ್ರೋತ್ಸಾಹವು ಬೇಕಾಗಿರುತ್ತದೆ. ಈ ಗ್ರಂಥಗಳಿಗೆ ಪೋಷಕರು, ಪ್ರೋತ್ಸಾಹಕರು ಮತ್ತು ಗ್ರಾಹಕರು– ಇವರನ್ನು ಒದಗಿಸಿಕೊಟ್ಟು ಸಹಾಯಮಾಡಬೇಕೆಂದು ಪ್ರಾರ್ಥಿಸುತ್ತೇವೆ. —ಪ್ರಕಾಶಕರು.

ಅಧ್ಯಾತ್ಮಗ್ರಂಥಾವಳಿ



ಶ್ರೀರಾಮಾನುಜಾಚಾರ್ಯರವರ ಗ್ರಂಥಗಳು

ಶ್ರೀಭಗವದ್ರಾಮಾನುಜವಿರಚಿತ

# ವೇದಾಂತಸಾರ

(ಬ್ರಹ್ಮಸೂತ್ರಗಳ ವ್ಯಾಖ್ಯಾನ)

## ಭಾಗ ೧

( ಒಂದನೆಯ ಅಧ್ಯಾಯದ ಒಂದು–ಎರಡನೆಯ ಪಾದಗಳು )

ಅನುವಾದಕರು :

ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳವರು

ಕ್ರಮಾಂಕ ೬೨

ಅಧ್ಯಾತ್ಮಪ್ರಕಾಶಕಾರ್ಯಾಲಯ,
ಹೊಳೆನರಸೀಪುರ.

೧೯೫೭

ಮೊದಲನೆಯ ಸಂಸ್ಕರಣ ೧೯೫೭
(೫೦೦ ಪ್ರತಿಗಳು)
( "ಅಧ್ಯಾತ್ಮಪ್ರಕಾಶ" ದಿಂದ ತೆಗೆದಚ್ಚು )



ಮುದ್ರಣಕಾರರು :
ವೈ. ನರಸಪ್ಪ,
ಅಧ್ಯಾತ್ಮಪ್ರಕಾಶಮುದ್ರಣಾಲಯ,
ಹೊಳೆನರಸೀಪುರ.

# ಪೀಠಿಕೆ

ಶ್ರೀ ಭಗವದ್ರಾಮಾನುಜಾಚಾರ್ಯರು ಬರೆದಿರುವ ಗ್ರಂಥಗಳು ಒಂಬತ್ತು. (೧) ವೇದಾರ್ಥಸಂಗ್ರಹ (೨) ಭಗವದ್ಗೀತಾಭಾಷ್ಯ (೩) ವೇದಾಂತಸಾರ (೪) ವೇದಾಂತದೀಪ (೫) ಶ್ರೀಭಾಷ್ಯ (೬) ಶ್ರೀರಂಗಗದ್ಯ (೭) ಶ್ರೀವೈಕುಂಠ ಗದ್ಯ (೮) ಶರಣಾಗತಿ ಗದ್ಯ (೯) ನಿತ್ಯಗ್ರಂಥ. ಇವುಗಳ ಮೇಲೆ ವ್ಯಾಖ್ಯಾನೋಪವ್ಯಾಖ್ಯಾನಗಳು ಹೇರಳವಾಗಿ ಹುಟ್ಟಿವೆ.

ಈ ಒಂಬತ್ತು ಗ್ರಂಥಗಳಲ್ಲಿ ಅಡಕವಾಗಿರುವ ಸಿದ್ಧಾಂತವನ್ನು **'ವಿಶಿಷ್ಟಾದ್ವೈತಸಿದ್ಧಾಂತ'**ವೆಂದು ಶ್ರೀವೈಷ್ಣವರು ಕರೆಯುತ್ತಾರೆ. ಚಿದಚಿದಾತ್ಮಕ ಪ್ರಪಂಚವೂ ಬ್ರಹ್ಮವೂ- ಎರಡೂ ಸತ್ಯವೇ ; ಚಿದಚಿದಾತ್ಮಕವಾದ ಪ್ರಪಂಚವು ಶರೀರವು, ಬ್ರಹ್ಮವು ಅಥವಾ ಪರಮಾತ್ಮನು ಶರೀರಿಯು ; ಚಿದಚಿದ್ರೂಪವಾದ ಪ್ರಕಾರವೂ ಬ್ರಹ್ಮರೂಪವಾದ ಪ್ರಕಾರಿಯೂ ಒಂದಕ್ಕೊಂದು ಅತ್ಯಂತಭಿನ್ನವಾಗಿದ್ದರೂ ಚಿದಚಿದ್ವಿಶಿಷ್ಟವಾದ ಬ್ರಹ್ಮವು ಏಕವೇ, ಒಂದೇ- ಎಂಬುದನ್ನು ತಿಳಿಸುವದಕ್ಕಾಗಿ ಈ ಸಿದ್ಧಾಂತವನ್ನು "ವಿಶಿಷ್ಟಾದ್ವೈತ"ವೆಂದು ಕರೆದಿರುತ್ತಾರೆ.

**ವೇದಾರ್ಥಸಂಗ್ರಹ**ವೆಂಬ ಗ್ರಂಥದಲ್ಲಿ ಉಪನಿಷತ್ತುಗಳಿಗೆಲ್ಲ ವಿಶಿಷ್ಟಾದ್ವೈತದಲ್ಲಿಯೇ ತಾತ್ಪರ್ಯವೆಂಬುದನ್ನು ಸ್ಪಷ್ಟಪಡಿಸಿ ಈ ಮತದಲ್ಲಿ ಅಂಗೀಕರಿಸಿರುವ ಇನ್ನೂ ಅನೇಕ ವಿಶೇಷಗಳನ್ನು ಸ್ಪಷ್ಟಪಡಿಸಿರುತ್ತದೆ. ಉಪನಿಷತ್ತುಗಳಿಗೆ ಪ್ರತ್ಯೇಕವಾಗಿ ಶ್ರೀರಾಮಾನುಜಾಚಾರ್ಯರು ಭಾಷ್ಯವನ್ನು ಬರೆದಿಲ್ಲವಾದ್ದರಿಂದ ಆ ಗ್ರಂಥವೇ ಇವರ ಉಪನಿಷತ್ಪ್ರಸ್ಥಾನವೆಂದು ಭಾವಿಸಬೇಕಾಗಿದೆ. **ವೇದಾಂತಸಾರ, ವೇದಾಂತದೀಪ ಶ್ರೀಭಾಷ್ಯ-** ಈ ಮೂರು ಗ್ರಂಥಗಳೂ ಬಾದರಾಯಣರ ಬ್ರಹ್ಮಸೂತ್ರಗಳ ಅಭಿಪ್ರಾಯವನ್ನೇ ವರ್ಣಿಸಿರುತ್ತವೆ. ವೇದಾಂತಸಾರವು ಇವುಗಳೊಳಗೆಲ್ಲ ತೀರ ಚಿಕ್ಕದಾದ್ದರಿಂದಲೂ ವೇದಾಂತದೀಪವು ಶ್ರೀಭಾಷ್ಯವನ್ನು ರಚಿಸಿದಮೇಲೆ ಅದರ ಸಾರಸಂಗ್ರಹರೂಪವಾಗಿ ಬರೆದ ಗ್ರಂಥವಾದ್ದರಿಂದಲೂ ನಾವು ಮೊದಲು ವೇದಾಂತಸಾರವನ್ನೇ ಕನ್ನಡಿಸಿ ಪ್ರಕಟಿಸಿರುತ್ತೇವೆ. ವೇದಾರ್ಥಸಂಗ್ರಹವನ್ನು ಪ್ರಕಟಿಸಿದ ಬಳಿಕ ಗೀತಾಭಾಷ್ಯವನ್ನು ಬೆಳಕಿಗೆ ಹಿಡಿಯುವೆವು. ಗದ್ಯತ್ರಯವನ್ನು ಈ ನಡುವೆ ಮೊದಲೇ ಪ್ರಕಾಶಿಸಬೇಕೆಂಬ ಸಂಕಲ್ಪವಿದೆ.

ಈಗ ವೇದಾರ್ಥಸಂಗ್ರಹವನ್ನೂ ವೇದಾಂತಸಾರವನ್ನೂ ಮೂಲಸಮೇತವಾಗಿ ಟಿಪ್ಪಣಿಗಳೊಡನೆ ಪ್ರಕಟಿಸಿರುವೆವಾದರೂ ಅವುಗಳನ್ನು ತಿಳಿದುಕೊಳ್ಳುವದಕ್ಕೆ ವಿಶಿಷ್ಟಾದ್ವೈತಸಂಮತವಾದ ಉಪನಿಷದರ್ಥವನ್ನು ತಿಳಿದುಕೊಳ್ಳುವದು ಅವಶ್ಯ ;

ಆದ್ದರಿಂದ ರಂಗರಾಮಾನುಜರ ಉಪನಿಷದ್ವ್ಯಾಖ್ಯಾನಗಳನ್ನು ಸಂಸ್ಕೃತಮೂಲವನ್ನು ಬಿಟ್ಟಾದರೂ ಕನ್ನಡದಲ್ಲಿ ಅನುವಾದಮಾಡಿ ಪ್ರಕಟಿಸುವದು ಅವಶ್ಯಕ. ಆದರೆ ಅದಕ್ಕೆ ಮಹಾಜನರ ಪ್ರೋತ್ಸಾಹವು ಅತ್ಯವಶ್ಯವಾಗಿರುತ್ತದೆ.

ಪ್ರಕೃತವಾದ ವೇದಾಂತಸಾರವನ್ನು ಓದುವವರು ಆಯಾ ಸ್ಥಲದಲ್ಲಿ ಗುರುತುಮಾಡಿರುವ ಉಪನಿಷತ್ತುಗಳ ಮೂಲವನ್ನು ನೋಡಿದರೇ ಈ ಗ್ರಂಥದ ಅಭಿಪ್ರಾಯವು ಸ್ಪಷ್ಟವಾಗಿ ತಿಳಿಯುತ್ತದೆ ಎಂಬುದನ್ನು ನೆನಪಿನಲ್ಲಿಡಬೇಕು. ಉಪನಿಷದ್ವಾಕ್ಯಗಳಿಗೆ ಶಾಂಕರಭಾಷ್ಯವನ್ನು ಓದಿದವರು ಆ ಅರ್ಥವು ಈ ಸಿದ್ಧಾಂತಕ್ಕೂ ಒಪ್ಪೆಂದು ಭ್ರಮಿಸುವ ಸಂಭವವಿದೆ. ಆದ್ದರಿಂದ ಆ ವಿಷಯಕ್ಕೆ ಎಚ್ಚರಿಕೆಯನ್ನು ವಹಿಸುವದು ಅವಶ್ಯ.

ಗ್ರಂಥವು ಪೂರ್ಣವಾಗಿ ಪ್ರಕಟವಾದ ಬಳಿಕ ಇದಕ್ಕೊಂದು ಪೀಠಿಕೆಯನ್ನು ಬರೆದು ಗ್ರಂಥದ ಸಾರವನ್ನು ಪ್ರಕಟಿಸಬೇಕೆಂದು ಮಾಡಿರುತ್ತೇವೆ. ಆದರೆ ಅದೆಲ್ಲ ಈಗ ಹೊರಕ್ಕೆ ಬಂದಿರುವ ಗ್ರಂಥಭಾಗಕ್ಕೆ ದೊರಕುವ ಪ್ರೋತ್ಸಾಹವನ್ನು ಅವಲಂಬಿಸಿರುತ್ತದೆ. ಈ ಪ್ರಕಟನೆಗಳು ಕೇವಲ ವಿಶಿಷ್ಟಾದ್ವೈತಿಗಳಿಗೆ ಮಾತ್ರ ಪ್ರಯೋಜನಕರವೆಂದು ತಿಳಿಯಬಾರದು. ತುಲನಾತ್ಮಕದೃಷ್ಟಿಯಿಂದ ವೇದಾಂತವನ್ನು ಅಭ್ಯಾಸಮಾಡಬೇಕೆಂದಿರುವ ವೇದಾಂತಜಿಜ್ಞಾಸುಗಳಿಗೆಲ್ಲ ಇವುಗಳಿಂದ ಪ್ರಯೋಜನವುಂಟು. ಶ್ರೀಮನ್ನಾರಾಯಣನ ಪ್ರೇರಣೆಯಿಂದ ನಮ್ಮ ಓದುಗರು ಈ ಕಾರ್ಯದಲ್ಲಿ ಆಸಕ್ತಿಯನ್ನು ವಹಿಸುವರೆಂದು ಹಾರೈಸುತ್ತೇವೆ.

ಹೇವಿಳಂಬಿಸಂವತ್ಸರದ<br>ಆಷಾಢ ಶುದ್ಧ ೧೫

ಪ್ರಕಾಶಕರು.

# ವಿಷಯಾನುಕ್ರಮಣಿಕೆ


| ವಿಷಯ | | ಪುಟ |
|---|---|---|
| ಪೀಠಿಕೆ | ...... | 3 |
| ಸಂಕೇತಗಳ ವಿವರಣೆ | ...... | 6 |

**ಅಧ್ಯಾಯ ೧ ಪಾದ ೧**

| | | | |
|---|---|---|---|
| ೧ | ಜಿಜ್ಞಾಸಾಧಿಕರಣ | ...... | ೧ |
| ೨ | ಜನ್ಮಾದ್ಯಧಿಕರಣ | ...... | ೫ |
| ೩ | ಶಾಸ್ತ್ರಯೋನಿತ್ವಾಧಿಕರಣ | ...... | ೨೨ |
| ೪ | ಸಮನ್ವಯಾಧಿಕರಣ | ...... | ೨೩ |
| ೫ | ಈಕ್ಷತ್ಯಧಿಕರಣ | ...... | ೨೪ |
| ೬ | ಆನಂದಮಯಾಧಿಕರಣ | ...... | ೩೩ |
| ೭ | ಅಂತರಧಿಕರಣ | ...... | ೩೯ |
| ೮–೯ | ಆಕಾಶಪ್ರಾಣಾಧಿಕರಣಗಳು | ...... | ೪೬ |
| ೧೦ | ಜ್ಯೋತಿರಧಿಕರಣ | ...... | ೪೮ |
| ೧೧ | ಇಂದ್ರಪ್ರಾಣಾಧಿಕರಣ | ...... | ೫೩ |

**ಅಧ್ಯಾಯ ೧–ಪಾದ ೨**

| | | | |
|---|---|---|---|
| ೧೨ | ಸರ್ವತ್ರಪ್ರಸಿದ್ಧ್ಯಧಿಕರಣ | ...... | ೬೦ |
| ೧೩ | ಅತ್ರ್ರಧಿಕರಣ | ...... | ೬೩ |
| ೧೪ | ಅಂತರಧಿಕರಣ | ...... | ೬೭ |
| ೧೫ | ಅಂತರ್ಯಾಮ್ಯಧಿಕರಣ | ...... | ೭೦ |
| ೧೬ | ಅದೃಶ್ಯತ್ವಾದಿಗುಣಕಾಧಿಕರಣ | ...... | ೭೨ |
| ೧೭ | ವೈಶ್ವಾನರಾಧಿಕರಣ | ...... | ೭೪ |

# ಸಂಕೇತಗಳ ವಿವರಣೆ

| ಸಂಕೇತ | ವಿವರಣೆ |
|---|---|
| ಅಥ. ಬ್ರ. ಸೂ. | ಅಥರ್ವವೇದ, ಬ್ರಹ್ಮಸೂಕ್ತ |
| ಐ. | ಐತರೇಯೋಪನಿಷತ್ತು |
| ಐ. ಆ. | ಐತರೇಯಾರಣ್ಯಕ |
| ಕ. | ಕಠೋಪನಿಷತ್ತು |
| ಕೌ. | ಕೌಷೀತಕ್ಯುಪನಿಷತ್ತು |
| ಗೀ. | ಭಗವದ್ಗೀತೆ |
| ಛಾಂ. | ಛಾಂದೋಗ್ಯೋಪನಿಷತ್ತು |
| ಜೈ. ಸೂ. | ಜೈಮಿನೀಯಸೂತ್ರಗಳು |
| ತೈ. | ತೈತ್ತಿರೀಯೋಪನಿಷತ್ತು |
| ತೈ. ಆ. | ತೈತ್ತಿರೀಯಾರಣ್ಯಕ |
| ತೈ. ನಾ. | ತೈತ್ತಿರೀಯ, ನಾರಾಯಣಪನ್ನ |
| ಪಾ. | ಪಾಣಿನೀಯಸೂತ್ರ |
| ಬೃ. | ಬೃಹದಾರಣ್ಯಕೋಪನಿಷತ್ತು |
| ಬೃ. ಮಾ. | ಬೃಹದಾರಣ್ಯಕ, ಮಾಧ್ಯಂದಿನಪಾಠ |
| ಮುಂ. | ಮುಂಡಕೋಪನಿಷತ್ತು |
| ವಿ. ಪು. | ವಿಷ್ಣುಪುರಾಣ |
| ವೇ. ಸೂ. | ಬಾದರಾಯಣಕೃತವೇದಾಂತಸೂತ್ರಗಳು |
| ಶತ. ಬ್ರಾ. | ಶತಪಥಬ್ರಾಹ್ಮಣ |
| ಶ್ವೇ. | ಶ್ವೇತಾಶ್ವತರೋಪನಿಷತ್ತು |
| ಸು. | ಸುಬಾಲೋಪನಿಷತ್ತು |

|| ಓಮ್ ||

ಶ್ರೀಮದ್ರಾಮಾನುಜಾಚಾರ್ಯವಿರಚಿತ

# ವೇದಾಂತಸಾರ



## ಒಂದನೆಯ ಅಧ್ಯಾಯ–ಒಂದನೆಯ ಪಾದ

### ಮಂಗಲ– ಗ್ರಂಥಾರಂಭಪ್ರತಿಜ್ಞೆ

(ಮೂಲ)

**ಸಮಸ್ತಚಿದಚಿದ್ವಸ್ತುಶರೀರಾಯಾಖಿಲಾತ್ಮನೇ ।**
**ಶ್ರೀಮತೇ ನಿರ್ಮಲಾನನ್ದೋದನ್ವತೇ ವಿಷ್ಣವೇ ನಮಃ ॥**
**ಪರಮಪುರುಷಪ್ರಸಾದಾತ್ ವೇದಾನ್ತಸಾರ ಉದ್ಧ್ರಿಯತೇ ॥**

(ಅರ್ಥ)

ಎಲ್ಲಾ ಚಿದಚಿದ್ವಸ್ತುಗಳೂ ಯಾವಾತನಿಗೆ ಶರೀರವೋ, (ಯಾವನು) ಎಲ್ಲಕ್ಕೂ ಆತ್ಮನೋ, (ಯಾವನು) ಶ್ರೀಯುಕ್ತನೂ ಯಾವ ಕಲ್ಮಷವೂ ಇಲ್ಲದ ಆನಂದಸಾಗರನೂ ಆಗಿರುವನೋ ಆ ವಿಷ್ಣುವಿಗೆ[1] ನಮಸ್ಕಾರ !

ಪರಮಪುರುಷನ[2] ಪ್ರಸಾದದಿಂದ ವೇದಾಂತದ ಸಾರವನ್ನು ಎತ್ತಿ ತಿಳಿಸಲಾಗುವದು.

### ಜಿಜ್ಞಾಸಾಧಿಕರಣ

### ೧. ಅಥಾತೋ ಬ್ರಹ್ಮಜಿಜ್ಞಾಸಾ ( ೧-೧-೧ )

(ಮೂಲ)

೧. ಅತ್ರಾಯಮ್ ಅಥಶಬ್ದಃ ಆನನ್ತರ್ಯೇ ವರ್ತತೇ । ಅತಃಶಬ್ದ ಶಿರಸ್ಕತ್ವಾತ್ । ಅತಃಶಬ್ದಶ್ಚ ಪೂರ್ವವೃತ್ತಸ್ಯ ಹೇತುಭಾವೇ । ಪೂರ್ವವೃತ್ತಂ ಚ ಕರ್ಮಜ್ಞಾನಮಿತಿ ವಿಜ್ಞಾಯತೇ । ಆರಿಪ್ಸಿತಸ್ಯ ಬ್ರಹ್ಮಜ್ಞಾನಸ್ಯ ವೇದಾರ್ಥ

---

1. ವಿಷ್ಣು ಎಂಬುದು ವಿಶಿಷ್ಟಾದ್ವೈತದಂತೆ ಪರಮಾತ್ಮನ ಹೆಸರು. ಸಿದ್ಧಾಂತಸಮ್ಮತವಾದ ಪರಮಾತ್ಮನ ಸ್ವರೂಪವನ್ನು ಈ ಮಂಗಳಶ್ಲೋಕದಲ್ಲಿ ಸಂಗ್ರಹವಾಗಿ ಹೇಳಿದೆ.

2. ಪರಮಾತ್ಮನ.

ವಿಚಾರೈಕದೇಶತ್ವಾತ್ । ಅಧೀತವೇದಸ್ಯ ಹಿ ಪುರುಷಸ್ಯ ಕರ್ಮಪ್ರತಿಪಾದನೋಪಕ್ರಮತ್ವಾದ್ ವೇದಾನಾಂ, ಕರ್ಮವಿಚಾರಃ ಪ್ರಥಮಂ ಕಾರ್ಯ ಇತಿ 'ಅಥಾತೋ ಧರ್ಮಜಿಜ್ಞಾಸಾ' (ಜೈ. ಸೂ. ೧-೧-೧) ಇತ್ಯುಕ್ತಮ್ । ಕರ್ಮಣಾಂ ಚ ಪ್ರಕೃತಿವಿಕೃತಿರೂಪಾಣಾಂ ಧರ್ಮಾರ್ಥಕಾಮರೂಪಪುರುಷಾರ್ಥಸಾಧನತಾನಿಶ್ಚಯಃ 'ಪ್ರಭುತ್ವಾದಾರ್ತ್ವಿಜ್ಯಮ್' ( ಜೈ. ಸೂ. ೧೨-೪-೪೦ ) ಇತ್ಯನ್ತೇನ ಸೂತ್ರಕಲಾಪೇನ ಸಸಂಕರ್ಷೇಣ[1] ಕೃತಃ ॥

ಏವಂ ವೇದಸ್ಯಾರ್ಥಪರತ್ವೇ ಕರ್ಮಣಾಂ ಚ ತದರ್ಥತ್ವೇ ತೇಷಾಂ ಚ ಕೇವಲಾನಾಂ ತ್ರಿವರ್ಗಫಲತ್ವೇ ನಿಶ್ಚಿತೇ ಸತಿ, ವೇದೈಕದೇಶಭೂತವೇದಾನ್ತಭಾಗೇ ಕೇವಲಕರ್ಮಣಾಮ್ ಅಲ್ಪಾಸ್ಥಿರಫಲತ್ವಂ ಬ್ರಹ್ಮಜ್ಞಾನಸ್ಯ ಚ ಅನನ್ತಸ್ಥಿರಫಲತ್ವಮ್ ಆಪಾತತೋ ದೃಷ್ಟ್ವಾ, ಅನನ್ತರಂ ಮುಮುಕ್ಷೋರವಧಾರಿತಪರಿನಿಷ್ಪನ್ನವಸ್ತುಬೋಧಜನನಶಬ್ದಶಕ್ತೇಃ ಪುರುಷಸ್ಯ ಬ್ರಹ್ಮಬುಭುತ್ಸಾ ಜಾಯತ ಇತಿ 'ಅಥಾತೋ ಬ್ರಹ್ಮಜಿಜ್ಞಾಸಾ' ಇತಿ ಕರ್ಮವಿಚಾರಾನನ್ತರಂ ತತ ಏವ ಹೇತೋಃ ಬ್ರಹ್ಮವಿಚಾರಃ ಕರ್ತವ್ಯ ಇತ್ಯುಕ್ತಂ ಭವತಿ ॥

(ಅರ್ಥ)

### ೧. ಇನ್ನು ಆದ್ದರಿಂದ ಬ್ರಹ್ಮಜಿಜ್ಞಾಸೆ.

ಇಲ್ಲಿ ಈ 'ಇನ್ನು' ಎಂಬ ಮಾತು ಆ ಬಳಿಕ ಎಂಬರ್ಥದಲ್ಲಿ ಬಂದಿರುತ್ತದೆ ; ಏಕೆಂದರೆ ಇದಾದ ಬಳಿಕ 'ಆದ್ದರಿಂದ' ಎಂಬ ಮಾತಿದೆ. ಆದ್ದರಿಂದ ಎಂಬ ಶಬ್ದವೂ, ಹಿಂದೆ ಆಗಿರುವದು ಇದಕ್ಕೆ ಹೇತು (ಎಂಬರ್ಥ)ದಲ್ಲಿ ಬಂದಿರುತ್ತದೆ. ಹಿಂದೆ ಆಗಿರುವದು ಕರ್ಮದ ಜ್ಞಾನವು ಎಂದು ನಿಶ್ಚಯಿಸಬೇಕಾಗಿದೆ ; ಏಕೆಂದರೆ ಇಲ್ಲಿ ಪ್ರಾರಂಭಿಸಬೇಕೆಂದಿರುವ ಬ್ರಹ್ಮಜ್ಞಾನ(ವಿಚಾರ)ವು ವೇದಾರ್ಥವಿಚಾರದಲ್ಲಿ ಒಂದಂಶವಾಗಿರುತ್ತದೆ.[2] ಹೇಗೆಂದರೆ, ವೇದವನ್ನು ಅಧ್ಯಯನಮಾಡಿದ ಪುರುಷನು[3] ವೇದಗಳು ಕರ್ಮವನ್ನು ಪ್ರತಿಪಾದನೆಮಾಡುವದರಿಂದ ಉಪಕ್ರಮಿಸಿರುವದರಿಂದ ಕರ್ಮವಿಚಾರವನ್ನು ಮೊದಲು ಮಾಡಬೇಕಾದ್ದರಿಂದ 'ಇನ್ನು ಆದ್ದರಿಂದ ಧರ್ಮಜಿಜ್ಞಾಸೆ' (ಜೈ. ಸೂ. ೧-೧-೧) ಎಂದು ಹೇಳಿದ್ದಾಗಿದೆ.[4]

1. 'ಸಂಕರ್ಷಣೇನ' ಎಂದು ಪಾ॥. ಅನುವಾದವನ್ನು ನೋಡಿ.

2. ಅಥ ಎಂದು ವೇದಾರ್ಥವಿಚಾರವನ್ನು ಪ್ರತಿಜ್ಞೆಮಾಡಿತ್ತು, ವೇದಾರ್ಥದಲ್ಲಿ ಬ್ರಹ್ಮಜ್ಞಾನವೂ ಸೇರಿರುತ್ತದೆ.

3. 'ಸ್ವಾಧ್ಯಾಯವನ್ನು ಅಧ್ಯಯನಮಾಡಬೇಕು' ಎಂಬ ವಿಧಿಯಿಂದ ಅಧ್ಯಯನ ಮಾಡಿದವನು.

4. ಕರ್ಮಜ್ಞಾನವಾದರೆ ಎಲ್ಲವೂ ಮುಗಿಯಿತೆಂಬ ಅಭಿಪ್ರಾಯದಿಂದಲೇನೂ ಹಾಗೆ ಹೇಳಿಲ್ಲ.

ಮತ್ತು ಪ್ರಕೃತಿವಿಕೃತಿರೂಪವಾಗಿರುವ[1] ಕರ್ಮಗಳು ಧರ್ಮ, ಅರ್ಥ, ಕಾಮ-(ಈ) ರೂಪವಾದ ಪುರುಷಾರ್ಥಗಳಿಗೆ ಸಾಧನವಾಗಿರುವವೆಂಬ ನಿಶ್ಚಯವನ್ನು 'ಶಕ್ತಿಯಿರುವವರಿಂದ ಆರ್ತ್ವಿಜ್ಯವು (ಎಲ್ಲರಿಗೂ ಉಂಟು)' (ಜೈ. ಸೂ. ೧೨-೪-೪೦) ಎಂಬವರೆಗಿನ ಸಂಕರ್ಷಸಹಿತವಾದ[2] ಸೂತ್ರಸಮೂಹದಿಂದ ಮಾಡಿದ್ದಾಗಿದೆ.

ಹೀಗೆ ವೇದವು ಅರ್ಥಪರವೆಂದೂ ಕರ್ಮಗಳು ಅದಕ್ಕೆ ಅರ್ಥವೆಂದೂ ಆ ಕರ್ಮಗಳನ್ನು ಕೇವಲವಾಗಿ (ಮಾಡಿದರೆ) ತ್ರಿವರ್ಗಫಲವೆಂದೂ ನಿಶ್ಚಯಿಸಿದ ಮೇಲೆ ವೇದದ ಅಂಶವಾಗಿರುವ ವೇದಾಂತಭಾಗದಲ್ಲಿ ಕೇವಲಕರ್ಮಗಳಿಗೆ ಅಲ್ಪವೂ ಅನಿತ್ಯವೂ ಆದ ಫಲವೆಂದೂ ಬ್ರಹ್ಮಜ್ಞಾನಕ್ಕೆ ಅನಂತವಾದ ಸ್ಥಿರವಾದ ಫಲವೆಂದೂ ಸಾಮಾನ್ಯವಾಗಿ ತಿಳಿದುಕೊಂಡು ಆಬಳಿಕ ಶಬ್ದಕ್ಕೆ ಸಿದ್ಧವಸ್ತುವಿನ ಜ್ಞಾನವನ್ನುಂಟುಮಾಡುವ ಶಕ್ತಿಯೂ ಇದೆಯೆಂದು ನಿಶ್ಚಯಿಸಿಕೊಂಡ ಮುಮುಕ್ಷುವಾದ ಪುರುಷನಿಗೆ ಬ್ರಹ್ಮವನ್ನು ಅರಿತುಕೊಳ್ಳಬೇಕೆಂಬ ಇಚ್ಛೆಯು ಉಂಟಾಗುವದೆಂದು 'ಇನ್ನು ಆದ್ದರಿಂದ ಬ್ರಹ್ಮಜಿಜ್ಞಾಸೆ' ಎಂಬ (ಸೂತ್ರದಲ್ಲಿ) ಕರ್ಮವಿಚಾರವಾದ ಬಳಿಕ, ಆ ಕಾರಣದಿಂದಲೇ, ಬ್ರಹ್ಮವಿಚಾರವನ್ನು ಮಾಡತಕ್ಕದ್ದು ಎಂದು ಹೇಳಿದಂತೆ ಆಯಿತು.

(ಮೂಲ)

೨. ತದಿದಮಾಹ ಶ್ರುತಿಃ। 'ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ। ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್। ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್ಪ್ರಶಾನ್ತಚಿತ್ತಾಯ ಶಮಾನ್ವಿತಾಯ। ಯೇನಾಕ್ಷರಂ ಪುರುಷಂ ವೇದ ಸತ್ಯಂ ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್' (ಮುಂ. ೧ ೧-೧೨, ೧೩) ಇತಿ। ಬ್ರಾಹ್ಮಣಃ ವೇದಾಭ್ಯಾಸರತಃ। ಕರ್ಮಚಿತಾನ್ ಕರ್ಮಣಾ ಸಂಪಾದಿತಾನ್ ಲೋಕಾನ್ ಆರಾಧ್ಯಕ್ಷಯಿಷ್ಣುತ್ವೇನ ಕ್ಷಯಸ್ವಭಾವಾನ್ ಕರ್ಮಮೀಮಾಂಸಯಾ ಪರೀಕ್ಷ್ಯ। ಅಕೃತಃ ನಿತ್ಯಃ ಪರಮಪುರುಷಃ ಕೃತೇನ ಕರ್ಮಣಾ ನ ಸಂಪಾದ್ಯ ಇತಿ ಯೋ ನಿರ್ವೇದಮಾಯಾತ್, ಸ

---

1. ಪ್ರಕೃತಿಯೆಂದರೆ ಯಾವ ಕರ್ಮದ ವಿಷಯವಾಗಿ ಎಲ್ಲಾ ವಿವರವನ್ನೂ ವಾಕ್ಯದಿಂದಲೇ ಹೇಳಿದೆಯೋ ಅದು; ವಿಕೃತಿಯೆಂದರೆ ಪ್ರಕೃತಿಯಿಂದ ಕೆಲವು ವಿವರವನ್ನು ಅತಿದೇಶಮಾಡಿಕೊಳ್ಳಬೇಕಾಗಿರುವ ಕರ್ಮ.

2. ದೇವತಾಕಾಂಡಸಹಿತವಾದ ಎಂದರ್ಥ; 'ಸಂಕರ್ಷಣೇನ' ಎಂಬ ಪಾಠಕ್ಕೆ ಕರ್ಮಕಾಂಡವನ್ನು ಬೇರ್ಪಡಿಸಿಕೊಂಡು ಎಂದರ್ಥ; ಧರ್ಮವಿಚಾರವು ಬಹಳವಾಗಿರುವದರಿಂದ ಇದನ್ನು ಬೇರ್ಪಡಿಸಿಕೊಂಡಿದೆ ಎಂಬರ್ಥವನ್ನು ಶ್ರುತಪ್ರಕಾಶಿಕೆಯಲ್ಲಿ ತೆಗೆದಿದೆ.

ತದ್ವಿಜ್ಞಾನಾರ್ಥಂ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ । ಶ್ರೋತ್ರಿಯಂ ವೇದಾನ್ತವೇದಿನಮ್ ಬ್ರಹ್ಮನಿಷ್ಠಮ್ ಸಾಕ್ಷಾತ್ಕೃತಪರಮಪುರುಷಸ್ವರೂಪಮ್ । ಸಃ ಗುರುಃ ಸಮ್ಯಗುಪಸನ್ನಾಯ ತಸ್ಮೈ ಯೇನ ವಿದ್ಯಾವಿಶೇಷೇಣ ಅಕ್ಷರಂ ಸತ್ಯಮ್ ಪರಮಪುರುಷಂ ವೇದ ವಿದ್ಯಾತ್ ತಾಂ ಬ್ರಹ್ಮವಿದ್ಯಾಂ ಪ್ರೋವಾಚ ಪ್ರಬ್ರೂಯಾತ್ ಇತ್ಯರ್ಥಃ । 'ಸ ಗುರುಮೇವಾಭಿಗಚ್ಛೇತ್ । ತಸ್ಮೈ ಸ ವಿದ್ವಾನ್ ಪ್ರೋವಾಚ' ಇತ್ಯನ್ವಯಾತ್, ಅಪ್ರಾಪ್ತತ್ವಾಚ್ಚ । ವಿಧಾವಪಿ ಲಿಟೋ ವಿಧಾನಾತ್ 'ಛನ್ದಸಿ ಲುಙ್ಲಙ್ಲಿಟಃ' (ಪಾ. ೩-೪-೬) ಇತಿ ॥

(ಅರ್ಥ)

ಆ ಇದನ್ನು ಶ್ರುತಿಯು (ಹೀಗೆಂದು) ಹೇಳುತ್ತದೆ : 'ಕರ್ಮಚಿತವಾದ ಲೋಕಗಳನ್ನು ಪರೀಕ್ಷಿಸಿ ಬ್ರಾಹ್ಮಣನು ಅಕೃತವಾದದ್ದು ಕೃತದಿಂದ (ಸಿಕ್ಕುವ)ದಿಲ್ಲವಾಗಿ ವೈರಾಗ್ಯವನ್ನು ಹೊಂದಬೇಕು. ಅದನ್ನು ಅರಿತುಕೊಳ್ಳುವದಕ್ಕಾಗಿ ಅವನು ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವನ್ನೇ ಸಮಿತ್ಪಾಣಿಯಾಗಿ ಬಳಿಸಾರಬೇಕು. ಆ ವಿದ್ವಾಂಸನು ಚೆನ್ನಾಗಿ ಪ್ರಶಾಂತಚಿತ್ತನೂ ಶಮಾನ್ವಿತನೂ ಆಗಿ ಬಳಿಸಾರಿದ ಆತನಿಗೆ, ಯಾವದರಿಂದ ಅಕ್ಷರನಾದ ಸತ್ಯಪುರುಷನನ್ನು ಅರಿತುಕೊಳ್ಳಬಹುದೋ ಆ ಬ್ರಹ್ಮವಿದ್ಯೆಯನ್ನು ಇದ್ದಂತೆ ತಿಳಿಸಿಕೊಡಬೇಕು' (ಮುಂ. ೧-೧-೧೨, ೧೩). ಇಲ್ಲಿ ಬ್ರಾಹ್ಮಣನು ಎಂದರೆ ವೇದಾಭ್ಯಾಸದಲ್ಲಿ ನಿರತನಾದವನು. ಕರ್ಮಚಿತವಾದ ಎಂದರೆ ಕರ್ಮಗಳಿಂದ ಸಂಪಾದಿಸಿಕೊಂಡ ಲೋಕಗಳು ಆರಾಧ್ಯ(ದೇವತೆಗಳು) ಕ್ಷಯವಾಗುವರಾಗಿರುವದರಿಂದ (ತಾವೂ) ಕ್ಷಯವಾಗುವ ಸ್ವಭಾವದವುಗಳು ಎಂಬುದನ್ನು ಕರ್ಮಮೀಮಾಂಸೆಯಿಂದ ನೋಡಿ ತಿಳಿದುಕೊಂಡು ; ಅಕೃತನು ಎಂದರೆ ನಿತ್ಯನಾದ ಪರಮಪುರುಷನು ; ಕೃತದಿಂದ ಎಂದರೆ ಕರ್ಮದಿಂದ ಸಂಪಾದಿಸಿಕೊಳ್ಳುವದಕ್ಕೆ ಬರುವದಿಲ್ಲ- ಎಂದು ಯಾವನಿಗೆ ವೈರಾಗ್ಯವುಂಟಾಗುವದೋ ಅವನು ಅದನ್ನು ಅರಿತುಕೊಳ್ಳುವದಕ್ಕಾಗಿ ಸಮಿತ್ಪಾಣಿಯಾಗಿ[1] ಗುರುವನ್ನೇ ಬಳಿಸಾರಬೇಕು. ಶ್ರೋತ್ರಿಯನು ಎಂದರೆ ವೇದಾಂತಗಳನ್ನು ತಿಳಿದುಕೊಂಡಿರುವವನೂ ಬ್ರಹ್ಮನಿಷ್ಠನು ಎಂದರೆ ಪರಮಪುರುಷನ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡಿರುವವನೂ (ಆದ ಗುರುವಿನ ಬಳಿಗೆ ಹೋಗಬೇಕು). ಆ ಗುರುವು ಚೆನ್ನಾಗಿ ತನ್ನ ಬಳಿಸಾರಿದ ಅವನಿಗೆ ಯಾವ ವಿದ್ಯಾವಿಶೇಷದಿಂದ ಅಕ್ಷರನಾದ ಸತ್ಯನಾದ ಪರಮಪುರುಷನನ್ನು ಅರಿತುಕೊಳ್ಳಬಹುದೋ ಆ ಬ್ರಹ್ಮವಿದ್ಯೆಯನ್ನು (ಪ್ರೋವಾಚ) ಹೇಳಬೇಕು ಎಂದರ್ಥ. 'ಅವನು ಗುರುವಿನ ಬಳಿಗೇ ಹೋಗಬೇಕು, ಅವನಿಗೆ ಆ ವಿದ್ವಾಂಸನು (ಪ್ರೋವಾಚ) ಹೇಳಬೇಕು' ಎಂದು

---

1. ಪವಿತ್ರವಾದ ಕಾಣಿಕೆಯೊಡನೆ.

ಅನ್ವಯವಾಗುವದರಿಂದ (ಹೀಗೆ 'ಹೇಳಬೇಕು' ಎಂದೇ ಅರ್ಥವನ್ನು ಮಾಡಬೇಕು). ಗುರುವು ಹೇಳಿಕೊಡಬೇಕು ಎಂಬುದು ಮತ್ತೆಯಾವ ವಿಧಿಯಿಂದಲೂ ಪ್ರಾಪ್ತವಾಗಿರುವದಿಲ್ಲವಾದ್ದರಿಂದಲೂ (ಹೀಗೆ ಅರ್ಥವನ್ನು ಮಾಡಬೇಕು.) 'ಲುಙ್ (ಸಾಮಾನ್ಯಭೂತ), ಲಙ್ (ಅನದ್ಯತನಭೂತ), ಲಿಟ್ (ಪರೋಕ್ಷಭೂತ)- ಇವು ವೇದವಲ್ಲಿ (ಬೇರೆ ಅರ್ಥವಲ್ಲಿಯೂ ಇರುತ್ತವೆ)' (ಪಾ. ೩-೪-೬) ಎಂದು ವಿಧ್ಯರ್ಥದಲ್ಲಿಯೂ ಲಿಙ್ರೂಪವನ್ನು (ವ್ಯಾಕರಣವಲ್ಲಿ) ವಿಧಿಸಿರುವದರಿಂದಲೂ (ಹೀಗೆ ಅರ್ಥವನ್ನು ಮಾಡಬೇಕು).

## ಜನ್ಮಾದ್ಯಧಿಕರಣ

### ೨. ಜನ್ಮಾದ್ಯಸ್ಯ ಯತಃ (೧-೧-೨)

(ಮೂಲ)

೩. ಅಸ್ಯ ವಿಚಿತ್ರಚಿದಚಿನ್ಮಿಶ್ರಸ್ಯ ವ್ಯವಸ್ಥಿತಸುಖದುಃಖೋಪಭೋಗಸ್ಯ ಜಗತಃ ಜನ್ಮಸ್ಥಿತಿಲಯಾ ಯತಃ ತದ್ ಬ್ರಹ್ಮೇತಿ ಪ್ರತಿಪಾದಯತಿ ಶ್ರುತಿರಿತ್ಯರ್ಥಃ. 'ಯತೋ ವಾ ಇಮಾನಿ ಭೂತಾನಿ ಜಾಯನ್ತೇ... ತದ್ಬ್ರಹ್ಮ' (ತೈ. ೩-೧) ಇತಿ ॥

(ಅರ್ಥ)

**೨. ಈ ಜಗತ್ತಿನ ಜನ್ಮಾದಿಯು ಯಾವದರಿಂದಲೋ (ಅದು ಬ್ರಹ್ಮವು).**

ಈ ಬಗೆಬಗೆಯ ಚಿದಚಿನ್ಮಿಶ್ರವಾದ ಬೇರೆಬೇರೆಯಾಗಿ ಗೊತ್ತಾಗಿರುವ ಸುಖದುಃಖಭೋಗಗಳುಳ್ಳ ಜಗತ್ತಿಗೆ ಜನ್ಮಸ್ಥಿತಿಲಯಗಳು ಏತರಿಂದಾಗುವವೋ ಅದು ಬ್ರಹ್ಮವು- ಎಂದು 'ಯಾವದರಿಂದ ಈ ಭೂತಗಳು ಉಂಟಾಗುವವೋ..... ಅದು ಬ್ರಹ್ಮವು' (ತೈ. ೩-೧) ಎಂಬೀ ಶ್ರುತಿಯು ಪ್ರತಿಪಾದಿಸುತ್ತದೆ ಎಂದರ್ಥ.

(ಮೂಲ)

೪. ಸೂತ್ರೇ ಯತ ಇತಿ ಹೇತೌ ಪಞ್ಚಮೀ । ಜನಿಸ್ಥಿತಿಲಯಾನಾಂ ಸಾಧಾರಣತ್ವಾತ್ । ಜನಿಹೇತುತ್ವಂ ಚ ನಿಮಿತ್ತೋಪಾದಾನರೂಪಂ ವಿವಕ್ಷಿತಮ್। 'ಯತಃ' ಇತಿ ಹಿ ಶ್ರುತಿಃ । ಇಹೋಭಯವಿಷಯಾ ಕಥಮಿತಿ ಚೇತ್। 'ಯತೋ ವಾ ಇಮಾನಿ' ಇತಿ ಪ್ರಸಿದ್ಧವನ್ನಿರ್ದೇಶಾತ್, ಪ್ರಸಿದ್ಧೇಶ್ಚ ಉಭಯವಿಷಯತ್ವಾತ್ । 'ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್' (ಛಾಂ. ೬-೨-೧) । 'ತದೈಕ್ಷತ ಬಹುಸ್ಯಾಂ ಪ್ರಜಾಯೇಯೇತಿ । ತತ್ತೇಜೋಽ

ಸೃಜತ' (ಛಾಂ. ೬-೨-೩) ಇತ್ಯತ್ರ ಸದೇವೇದಮ್ ಅಗ್ರೇ ಏಕಮೇವಾಽಽಸೀತ್ ಇತಿ ಉಪಾದಾನತಾಂ ಪ್ರತಿಪಾದ್ಯ, 'ಅದ್ವಿತೀಯಮ್' ಇತಿ ಅಧಿಷ್ಠಾತ್ರನ್ತರನಿವಾರಣಾತ್ ಸಚ್ಛಬ್ದವಾಚ್ಯಂ ಬ್ರಹ್ಮೈವ ನಿಮಿತ್ತಮುಪಾದಾನಂ ಚೇತಿ ವಿಜ್ಞಾಯತೇ । ತಥಾ 'ತದೈಕ್ಷತ ಬಹು ಸ್ಯಾಂ ಪ್ರಜಾಯೇಯ' ಇತ್ಯಾತ್ಮನ ಏವ ವಿಚಿತ್ರಸ್ಥಿರತ್ರಸರೂಪೇಣ ಬಹುಭವನಂ ಸಂಕಲ್ಪ್ಯ ತಥೈವ ಸೃಷ್ಟಿವಚನಾಚ್ಚ । ಅತಃ ಶ್ರುತಾವಪಿ ಯತ ಇತಿ ಹೇತೌ ಪಞ್ಚಮೀ ॥

(ಅರ್ಥ)

ಸೂತ್ರದಲ್ಲಿ 'ಯತಃ' ಎಂಬಲ್ಲಿ ಪಂಚಮೀವಿಭಕ್ತಿಯನ್ನು ಹೇತ್ವರ್ಥದಲ್ಲಿ ಪ್ರಯೋಗಿಸಿದೆ. ಏಕೆಂದರೆ (ಅದು) ಜನ್ಮ, ಸ್ಥಿತಿ, ಲಯ– ಎಲ್ಲಕ್ಕೂ ಸಮಾನ ವಾಗಿಯೇ (ಪ್ರಯುಕ್ತವಾಗಿದೆ).[1] ಜನ್ಮಕ್ಕೆ ಹೇತುವಾಗಿರುವದೆಂಬುದು ನಿಮಿತ್ತೋಪಾದಾನ(ಗಳೆಂಬ ಎರಡು) ರೂಪದ್ದು ಎಂಬುದು ವಿವಕ್ಷಿತವಾಗಿದೆ. 'ಯತಃ' (ಯಾವದರಿಂದ) ಎಂದಲ್ಲವೆ, ಶ್ರುತಿ ?

(ಪ್ರಶ್ನೆ) :– ಇಲ್ಲಿ (ಶ್ರುತಿಯು ಈ) ಎರಡರ ವಿಷಯವನ್ನು ಹೇಳುತ್ತದೆ ಎಂಬುದು ಹೇಗೆ (ಗೊತ್ತು) ?

(ಉತ್ತರ) :– ಏಕೆಂದರೆ 'ಯಾವದರಿಂದಲೇ ಈ ಭೂತಗಳು......' ಎಂದು (ಹೇತುವು) ಪ್ರಸಿದ್ಧವಾಗಿದೆಯೆಂಬಂತೆ (ಈ ಶ್ರುತಿಯಲ್ಲಿ) ಹೇಳಿದೆ.[2] (ಆ) ಪ್ರಸಿದ್ಧಿಯು ಎರಡು ಬಗೆಯದಾಗಿಯೂ ಇರುತ್ತದೆ. (ಹೇಗೆಂದರೆ) 'ಸೋಮ್ಯನೆ, ಇದು ಮೊದಲು ಸತ್ತೊಂದೇ ಎರಡನೆಯದಿಲ್ಲದೆ ಇತ್ತು' (ಛಾಂ. ೬–೨–೧), 'ಅದು ಬಹುವಾಗುವೆನು, ಹುಟ್ಟುವೆನು ಎಂದಿಂತು ಸಂಕಲ್ಪಿಸಿ ನೋಡಿತು' (ಛಾಂ.೬–೨–೩), ಅದು ತೇಜಸ್ಸನ್ನು ಸೃಷ್ಟಿಸಿತು, ಎಂಬಲ್ಲಿ ಇದು ಮೊದಲು ಸತ್ತೊಂದೇ ಆಗಿದ್ದಿತು ಎಂದು ಉಪಾದಾನತ್ವವನ್ನು ಹೇಳಿ, 'ಎರಡನೆಯದಿಲ್ಲದ' ಎಂದು ಮತ್ತೊಬ್ಬ ಅಧಿಷ್ಠಾತೃವೂ ಇರಲಿಲ್ಲವೆಂದಿರುವದರಿಂದ ಸಚ್ಛಬ್ದವಾಚ್ಯವಾದ ಬ್ರಹ್ಮವೇ ನಿಮಿತ್ತವೂ ಉಪದಾನವೂ (ಆಗಿದೆ) ಎಂದು ನಿಶ್ಚಯವಾಗುತ್ತದೆ. 'ಹೀಗೆಯೇ ಅದು ಬಹುವಾಗುವೆನು, ಹುಟ್ಟುವೆನು' ಎಂದು ತಾನೇ ಬಗೆಬಗೆಯ ಸ್ಥಾವರಜಂಗಮರೂಪದಿಂದ ಬಹುವಾಗುವದಾಗಿ ಸಂಕಲ್ಪಿಸಿ ಹಾಗೆಯೇ ಸೃಷ್ಟಿ ಮಾಡಿತು ಎಂದು ಹೇಳಿರುವದರಿಂದಲೂ (ಹೀಗೆಂದು ಗೊತ್ತಾಗುತ್ತದೆ). ಆದ್ದರಿಂದ (ಈ ತೈತ್ತಿರೀಯ)ಶ್ರುತಿಯಲ್ಲಿಯೂ ಹೇತ್ವರ್ಥದಲ್ಲಿಯೇ ಪಂಚಮೀವಿಭಕ್ತಿಯು (ಬಂದಿರುತ್ತದೆ ಎನ್ನಬೇಕು).

---

1. ಜನ್ಮಕ್ಕೆ ಕರ್ತೃವಾದದ್ದಕ್ಕೆ ಉಪಾದಾನವಾದದ್ದು ಪಂಚಮೀವಿಭಕ್ತಿಯಲ್ಲಿರುತ್ತದೆ ಎಂದು ವ್ಯಾಕರಣನಿಯಮವಿದೆ.

2. ವೈ ಎಂಬುದು ಪ್ರಸಿದ್ಧಾರ್ಥಕಶಬ್ದ.

(ಮೂಲ)

೫. ಅತ್ರೈವ ಬ್ರಹ್ಮಣೋ ಜಗನ್ನಿಮಿತ್ತತ್ವಮುಪಾದಾನತ್ವಂ ಚ ಪ್ರತಿಪಾದಿತಮ್। ಅರ್ಥವಿರೋಧಾತ್ 'ಅಸ್ಮಾನ್ಮಾಯೀ ಸೃಜತೇ ವಿಶ್ವಮೇತತ್' (ಶ್ವೇ. ೪-೯) ಇತ್ಯಾದಿವಿಶೇಷಶ್ರುತ್ಯಾ ಚಾಽಽಕ್ಷಿಪ್ಯ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾನ್ತಾನುಪರೋಧಾತ್' (ವೇ. ಸೂ. ೧-೪-೨೩). 'ಅಭಿಧ್ಯೋಪದೇಶಾಚ್ಚ' (ವೇ. ಸೂ. ೧-೪-೨೪), 'ಸಾಕ್ಷಾಚ್ಚೋಭಯಾಮ್ನಾನಾತ್' (ವೇ. ಸೂ. ೧-೪-೨೫), 'ಆತ್ಮಕೃತೇಃ' (ವೇ. ಸೂ. ೧-೪-೨೬)- ಇತ್ಯಾದಿಭಿಃ ಸೂತ್ರೈಃ ಪರಿಹರಿಷ್ಯತೇ ॥

(ಅರ್ಥ)

ಈ (ಸೂತ್ರ)ದಲ್ಲಿಯೇ ಬ್ರಹ್ಮವು ಜಗತ್ತಿಗೆ ನಿಮಿತ್ತವೂ ಉಪಾದಾನ(ಕಾರಣವೂ ಆಗಿದೆ) ಎಂದು ಪ್ರತಿಪಾದಿಸಲಾಗಿರುತ್ತದೆ. (ಆದರೆ ಈ) ಅರ್ಥವು (ಲೋಕಕ್ಕೆ) ವಿರುದ್ಧವಾಗಿರುವದರಿಂದಲೂ 'ಇದರಿಂದ ಮಾಯಿಯು ಈ ವಿಶ್ವವನ್ನು ಸೃಷ್ಟಿಸುತ್ತಾನೆ' (ಶ್ವೇ. ೪-೯) ಎಂದು ಮುಂತಾಗಿರುವ ವಿಶೇಷಶ್ರುತಿಯಿಂದಲೂ[1] (ಉಭಯಕಾರಣತ್ವವನ್ನು) ಆಕ್ಷೇಪಿಸಿ (ಪರಬ್ರಹ್ಮವು) ಪ್ರಕೃತಿಯೂ ಆಗಿದೆ, ಏಕೆಂದರೆ (ಹೀಗಾದರೆ ಶ್ರುತಿಯಲ್ಲಿರುವ ಸರ್ವವಿಜ್ಞಾನ)ಪ್ರತಿಜ್ಞೆಯೂ ದೃಷ್ಟಾಂತವೂ ಅವಿರುದ್ಧವಾಗುತ್ತವೆ (ವೇ. ಸೂ. ೧-೪-೨೩) ; 'ಸಂಕಲ್ಪವನ್ನು ಮಾಡಿತೆಂದು ಉಪದೇಶಿಸಿರುವದರಿಂದಲೂ (ಹೀಗೆ)' (ವೇ. ಸೂ. ೧-೪-೨೪); 'ನೇರಾಗಿ (ಈ) ಎರಡು (ಬಗೆಯ ಕಾರಣತ್ವವನ್ನು) ಶ್ರುತಿಯಲ್ಲಿ ಹೇಳಿಯೂ ಇದೆ' (ವೇ. ಸೂ. ೧-೪-೨೫) ; 'ತನ್ನನ್ನೇ ಜಗದಾಕಾರವಾಗಿ ಮಾಡಿರುವದೆಂದು (ಶ್ರುತಿಯಿರುವದರಿಂದಲೂ ಹೀಗೆ)' (ವೇ. ಸೂ. ೧-೪-೨೬)-ಎಂದುಮುಂತಾಗಿರುವ ಸೂತ್ರಗಳಿಂದ (ಆಕ್ಷೇಪವನ್ನು) ಪರಿಹರಿಸಲಾಗುವದು.

(ಮೂಲ)

೬. ನನು ಚ ಸರ್ವಜ್ಞಂ ಸರ್ವಶಕ್ತಿ ಸತ್ಯಸಂಕಲ್ಪಂ ನಿರವದ್ಯತಯಾ ನಿರಸ್ತಸಮಸ್ತಾಪುರುಷಾರ್ಥಗನ್ಧಂ ಬ್ರಹ್ಮೈವ ಆತ್ಮಾನಂ ವಿಚಿತ್ರಚಿದಚಿನ್ಮಿಶ್ರಂ ಜಗದ್ರೂಪಮಿದಂ ಸರ್ವಮಸೃಜತೇತಿ ಕಥಮುಪಪದ್ಯತೇ ? ತದೇತತ್ ಸೂತ್ರಕಾರಃ ಸ್ವಯಮೇವ ಪರಿಚೋದ್ಯ ಪರಿಹರಿಷ್ಯತಿ। 'ಅಪೀತೌ ತದ್ವತ್ಪ್ರಸಙ್ಗಾದಸಮಞ್ಜಸಮ್' (ವೇ.ಸೂ. ೨-೧-೮) 'ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ'

---

1. ಪರಮೇಶ್ವರನು ನಿಮಿತ್ತಕಾರಣನೇ, ಪ್ರಕೃತಿಯೇ ಉಪಾದಾನ- ಎಂಬರ್ಥವು ಈ ಶ್ರುತಿಯಲ್ಲಿ ತೋರುವದರಿಂದ ಇದು ವಿಶೇಷಶ್ರುತಿಯು ; 'ಯತಃ' ಎಂಬಂತೆ ಸಾಮಾನ್ಯ ಶ್ರುತಿಯಲ್ಲ.

(ವೇ. ಸೂ. ೨-೧-೨೧) ಇತಿ ಚೋದ್ಯಮ್ । ಪರಿಹಾರಸ್ತು 'ನ ತು ದೃಷ್ಟಾನ್ತಭಾವಾತ್' (ವೇ. ಸೂ. ೨-೧-೯), 'ಅಧಿಕಂ ತು ಭೇದನಿರ್ದೇಶಾತ್' (ವೇ.ಸೂ. ೨-೧-೨೩) ಇತಿ ಚ ॥

(ಅರ್ಥ)

(ಆಕ್ಷೇಪ) :- ಸರ್ವಜ್ಞನೂ ಸರ್ವಶಕ್ತಿಯೂ ಸತ್ಯಸಂಕಲ್ಪನೂ ನಿರ್ದುಷ್ಟನಾಗಿರುವದರಿಂದ ಯಾವ ಅಪುರುಷಾರ್ಥದ ವಾಸನೆಯೂ ಇಲ್ಲದ್ದೂ ಆದ ಬ್ರಹ್ಮವೇ ತನ್ನನ್ನು ತಾನೇ ಬಗೆಬಗೆಯ ಚಿದಚಿನ್ಮಿಶ್ರವಾದ ಜಗದ್ರೂಪವಾಗಿರುವ ಇದೆಲ್ಲದರ (ರೂಪದಿಂದ) ಸೃಷ್ಟಿಸಿಕೊಂಡಿತು ಎಂಬುದು ಹೇಗೆ ಹೊಂದುತ್ತದೆ ?

(ಪರಿಹಾರ) :- ಸೂತ್ರಕಾರರೇ ಆ ಈ ಆಕ್ಷೇಪವನ್ನು ತೆಗೆದು ಮುಂದೆ ಪರಿಹರಿಸುವರು. 'ಪ್ರಲಯದಲ್ಲಿ ಅದರಂತೆ (ಬ್ರಹ್ಮಕ್ಕೆ) ಪ್ರಸಕ್ತಿಯಾಗುವದರಿಂದ (ಇದು) ಅಸಮಂಜಸವು' (೨-೧-೮), '(ಕಾರ್ಯಭೂತನಾದ) ಇತರನಿಗೆ (ಬ್ರಹ್ಮಭಾವವನ್ನು) ಹೇಳಿರುವದರಿಂದ, ಹಿತವಾದದ್ದನ್ನು ಮಾಡಿಕೊಳ್ಳದಿರುವದೇ ಮುಂತಾದ ದೋಷವು ಪ್ರಸಕ್ತವಾಗುವದು' (ವೇ. ಸೂ. ೨-೧-೨೧ ಎಂದು) ಆಕ್ಷೇಪ. ಇದಕ್ಕೆ ಪರಿಹಾರವಾದರೋ 'ಹೀಗಿಲ್ಲ, ಏಕೆಂದರೆ (ನಮ್ಮ ಪಕ್ಷದಲ್ಲಿಯೂ ದೃಷ್ಟಾಂತವಿದೆ' (ವೇ. ಸೂ. ೨-೧-೯), '(ಬ್ರಹ್ಮಸ್ವರೂಪವು ಜೀವರೂಪಕ್ಕಿಂತ) ಅಧಿಕವಾಗಿದೆ ; ಏಕೆಂದರೆ ಶ್ರುತಿಯಲ್ಲಿ (ಇಬ್ಬರಿಗೂ) ಭೇದವನ್ನು ಹೇಳಿದೆ' (ವೇ.ಸೂ. ೨-೧-೨೨) ಎಂದು.

(ಮೂಲ)

೭. 'ಕ್ಷರಂ ತ್ವವಿದ್ಯಾ ಹ್ಯಮೃತಂ ತು ವಿದ್ಯಾ ವಿದ್ಯಾವಿದ್ಯೇ ಈಶತೇ ಯಸ್ತು ಸೋಽನ್ಯಃ' (ಶ್ವೇ. ೫-೧), 'ಸಕಾರಣಂ ಕರಣಾಧಿಪಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ' (ಶ್ವೇ. ೬-೯), 'ಕ್ಷರಂ ಪ್ರಧಾನಮಮೃತಾಕ್ಷರಂ ಹರಃ ಕ್ಷರಾತ್ಮಾನಾವೀಶತೇ ದೇವ ಏಕಃ' (ಶ್ವೇ. ೧-೧೦)। ಅಚಿದ್ವರ್ಗಂ ಸ್ವಾತ್ಮನೋ ಭೋಗ್ಯತ್ವೇನ ಹರತೀತಿ ಭೋಕ್ತಾ ಹರ ಇತ್ಯುಚ್ಯತೇ । 'ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ । ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ। ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ। ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ । ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ । ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ" (ಗೀ. ೧೫-೧೬, ೧೭, ೧೮) ಇತ್ಯಾದಿಶ್ರುತಿಸ್ಮೃತಿಗಣೈಃ ಪ್ರತ್ಯಗಾತ್ಮನೋ ಬ್ರಹ್ಮಣೋ ಭೇದೇನ ನಿರ್ದೇಶಾತ್ ಪರಮಪುರುಷಾರ್ಥಭಾಗಿನಃ ಪ್ರತ್ಯಗಾತ್ಮನೋಽ[illegible]ಸ್ಮಾದರ್ಥಾನ್ತರಭೂತಂ ಬ್ರಹ್ಮ । ತಚ್ಚ ಪ್ರತ್ಯಗಾತ್ಮಶರೀರತಯಾ ತದಾತ್ಮ

ಭೂತಮ್। ಪ್ರತ್ಯಗಾತ್ಮನಸ್ತ[1]ಚ್ಛರೀರತ್ವಂ ಬ್ರಹ್ಮಣಸ್ತದಾತ್ಮತ್ವಂ ಚ 'ಯ ಆತ್ಮನಿ ತಿಷ್ಠನ್.....ಯಸ್ಯಾತ್ಮಾ ಶರೀರಮ್' (ಬೃ. ಮಾ. ೩-೭-೨೦), 'ಏಷ ಸರ್ವ ಭೂತಾನ್ತರಾತ್ಮಾಽಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ' (ಸು. ೭) ಇತ್ಯಾದಿಶ್ರುತಿಶತಸಮಧಿಗತಮ್। ಸಶರೀರಸ್ಯಾಽಽತ್ಮನಃ ಕಾರ್ಯಾ ವಸ್ಥಾಪ್ರಾಪ್ತಿರಪಿ ಗುಣದೋಷವ್ಯವಸ್ಥಿತೇರ್ದೃಷ್ಟಾನ್ತಭಾವಾತ್ ಬ್ರಹ್ಮಣಿ ನ ದೋಷಪ್ರಸಕ್ತಿರಿತಿ ನಾಸಾಮಞ್ಜಸ್ಯಂ ವೇದಾನ್ತವಾಕ್ಯಸ್ಯೇತಿ 'ನ ತು ದೃಷ್ಟಾನ್ತ ಭಾವಾತ್' (ವೇ. ಸೂ. ೨-೧-೯) ಇತ್ಯುಕ್ತಮ್। ದೃಷ್ಟಾನ್ತಶ್ಚ ದೇವಮನು ಷ್ಯಾದಿಶಬ್ದವಾಚ್ಯಸ್ಯ ಸಶರೀರಸ್ಯಾಽಽತ್ಮನಃ 'ಮನುಷ್ಯೋ ಬಾಲೋ ಯುವಾ ಸ್ಥವಿರಃ' ಇತಿ ನಾನಾವಸ್ಥಾಪ್ರಾಪ್ತಾವಪಿ ಬಾಲತ್ವಯುವತ್ವಸ್ಥವಿರತ್ವಾದಯಃ ಶರೀರಗತಾ ದೋಷಾ ನಾತ್ಮಾನಂ ಸ್ಪೃಶನ್ತಿ, ಆತ್ಮಗತಾಶ್ಚ ಜ್ಞಾನಸುಖಾದಯೋ ನ ಶರೀರಮಿತಿ। ಅತಃ ಕಾರ್ಯಾವಸ್ಥಂ ಕಾರಣಾವಸ್ಥಂ ಚ ಬ್ರಹ್ಮ ಪ್ರತ್ಯಗಾತ್ಮ ಶರೀರತಯಾ ತದಾತ್ಮಭೂತಮಿತಿ ಪ್ರತ್ಯಗಾತ್ಮವಾಚಿನಾ ಶಬ್ದೇನ ಬ್ರಹ್ಮಾಭಿಧಾನೇ ತಚ್ಛಬ್ದಸಾಮಾನಾಧಿಕರಣ್ಯೇ ಚ ಹೇತುಂ ವಕ್ತುಂ ನಿರಸನೀಯಂ ಮತದ್ವಯಮ್ 'ಪ್ರತಿಜ್ಞಾಸಿದ್ಧೇರ್ಲಿಙ್ಗಮಾಶ್ಮರಥ್ಯಃ' (ವೇ.ಸೂ. ೧-೪-೨೦), 'ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ' (ವೇ. ಸೂ. ೧-೪-೨೧) ಇತ್ಯುಪನ್ಯಸ್ಯ 'ಅವಸ್ಥಿತೇರಿತಿ ಕಾಶಕೃತ್ಸ್ನಃ' (ವೇ. ಸೂ. ೧-೪-೨೨) ಇತಿ ಹೇತುರುಕ್ತಃ। 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್। ತದನು ಪ್ರವಿಶ್ಯ। ಸಚ್ಚ ತ್ಯಚ್ಚಾಭವತ್।' (ತೈ. ೨-೬) ಇತ್ಯಾದಿನಾ ಪ್ರತ್ಯಗಾತ್ಮನ ಆತ್ಮತಯಾ ಅವಸ್ಥಾನಾತ್ ಬ್ರಹ್ಮಣ ಸ್ತಚ್ಛಬ್ದೇನಾಭಿಧಾನಮ್, ತತ್ಸಾಮಾನಾಧಿಕರಣ್ಯೇನ ವ್ಯಪದೇಶಶ್ಚ ಇತ್ಯುಕ್ತಮ್॥

(ಅರ್ಥ)

'ಕ್ಷರವೆಂಬುದಾದರೆ ಅವಿದ್ಯೆ, ಅಮೃತವಾದರೊ ವಿದ್ಯೆ; ವಿದ್ಯಾವಿದ್ಯೆಗಳೆರ ಡನ್ನೂ ಯಾವನು ಆಳುತ್ತಾನೋ ಅವನು ಬೇರೆ' (ಶ್ವೇ. ೫-೧), 'ಅವನು ಕಾರಣವು, ಕರಣಾಧಿಪತಿಗೂ ಅಧಿಪತಿಯು; ಇವನನ್ನುಂಟುಮಾಡುವವನೂ ಯಾರೂ ಇಲ್ಲ, (ಇವನಿಗೆ) ಅಧಿಪತಿಯಾದವನೂ ಇಲ್ಲ' (ಶ್ವೇ. ೬-೯), 'ಕ್ಷರವೆಂದರೆ ಪ್ರಧಾನವು, ಅಮೃತವಾದ ಅಕ್ಷರವೆಂದರೆ ಹರನು, (ಈ) ಕ್ಷರಾತ್ಮರುಗಳಿಬ್ಬರನ್ನೂ ಒಬ್ಬ ದೇವನೇ ಆಳುತ್ತಿರುವನು' (ಶ್ವೇ. ೧-೧೦), ಅಚಿದ್ವರ್ಗವನ್ನು ತನಗೆ ಭೋಗ್ಯ ವಾಗಿ ತೆಗೆದುಕೊಳ್ಳುತ್ತಿರುವದರಿಂದ ಭೋಕ್ತೃವಾದ (ಜೀವನು) ಹರನೆನಿಸುತ್ತಾನೆ. 'ಲೋಕದಲ್ಲಿ ಕ್ಷರ, ಮತ್ತು ಅಕ್ಷರ- ಎಂಬೀ ಇಬ್ಬರು ಪುರುಷರು; ಕ್ಷರವೆಂದರೆ ಸರ್ವಭೂತಗಳು, ಕೂಟಸ್ಥವು ಅಕ್ಷರವು; (ಈ ಎರಡಕ್ಕಿಂತ)ಲೂ ಬೇರೆಯಾದ

1. 'ಪ್ರತ್ಯಗಾತ್ಮನಸ್ತು ಶರೀರತ್ವಂ' ಪಾ॥

ಉತ್ತಮಪುರುಷನಾದರೆ ಪರಮಾತ್ಮನು ಎನ್ನಿಸಿಕೊಳ್ಳುತ್ತಾನೆ ; ಆ ಅವ್ಯಯನಾದ
ಈಶ್ವರನು ಲೋಕತ್ರಯವನ್ನು ಪ್ರವೇಶಿಸಿ ಧರಿಸಿಕೊಂಡಿರುತ್ತಾನೆ. ಹೀಗೆ ನಾನು
ಕ್ಷರವನ್ನು ಮೀರಿ, ಅಕ್ಷರಕ್ಕಿಂತಲೂ ಉತ್ತಮನಾಗಿರುವೆನಷ್ಟೆ ; ಅದ್ದರಿಂದ
ಲೋಕದಲ್ಲಿಯೂ ವೇದದಲ್ಲಿಯೂ **ಪುರುಷೋತ್ತಮನೆಂದು** ಪ್ರಸಿದ್ಧನಾಗಿರು
ವೆನು.” (ಗೀ. ೧೫-೧೬, ೧೭,೧೮) -ಇವೇ ಮುಂತಾದ ಶ್ರುತಿಸ್ಮೃತಿಗಣಗಳಲ್ಲಿ
ಪ್ರತ್ಯಗಾತ್ಮನನ್ನು ಬ್ರಹ್ಮಕ್ಕಿಂತ ಬೇರೆಯೆಂದು ಹೇಳಿರುವದರಿಂದ **ಪರಮಪುರು**
**ಷಾರ್ಥಭಾಗಿಯಾದ ಪ್ರತ್ಯಗಾತ್ಮನಿಗಿಂತ ಬ್ರಹ್ಮವು ಅಧಿಕವು, ಬೇರೆ**
**ಯಾದ ವಸ್ತು (ವೇ. ಸೂ. ೨-೧-೨೨), ಅದು ಪ್ರತ್ಯಗಾತ್ಮನನ್ನು ಶರೀರ**
**ವಾಗುಳ್ಳದ್ದಾಗಿ ಅವನಿಗೆ ಆತ್ಮಭೂತವಾಗಿರುತ್ತದೆ.** ಪ್ರತ್ಯಗಾತ್ಮನು
ಶರೀರವೆಂಬುದೂ ಬ್ರಹ್ಮವು ಅವನಿಗೆ ಆತ್ಮನೆಂಬುದೂ ‘ಯಾವನು ಆತ್ಮನಲ್ಲಿರು
ವವನಾಗಿ.....ಯಾವನಿಗೆ ಆತ್ಮನು ಶರೀರವೋ’ (ಬೃ. ಮಾ. ೩-೭-೩೦), ‘ಈತನು
ಸರ್ವಭೂತಗಳಿಗೂ ಅಂತರಾತ್ಮನು, ಅಪಹತಪಾಪ್ಮನು. ದಿವ್ಯನಾದ ಏಕದೇವ
ನಾದ ನಾರಾಯಣನು’ (ಸು. ೭) -ಎಂಬಿವೇ ಮುಂತಾದ ನೂರಾರು ಶ್ರುತಿಗಳಿಂದ
ಗೊತ್ತಾಗಿರುತ್ತದೆ. **ಸಶರೀರನಾದ ಆತ್ಮನು ಕಾರ್ಯಾವಸ್ಥೆಯನ್ನು ಹೊಂದಿ**
**ದರೂ ಗುಣದೋಷಗಳು ಬೇರೆಬೇರೆಯಾಗಿ ವ್ಯವಸ್ಥಿತವಾಗಿರುವದಕ್ಕೆ**
**ದೃಷ್ಟಾಂತವಿರುವದರಿಂದ ಬ್ರಹ್ಮದಲ್ಲಿ (ಆ) ದೋಷಗಳ ಪ್ರಸಕ್ತಿಯಿರು**
**ವದಿಲ್ಲವಾಗಿ ವೇದಾಂತವಾಕ್ಯಕ್ಕೆ ಅಸಾಮಂಜಸ್ಯವಿಲ್ಲ ಎಂಬ (ಅಭಿಪ್ರಾಯ**
**ದಿಂದ) ‘ಹಾಗಲ್ಲ, ಏಕೆಂದರೆ ದೃಷ್ಟಾಂತವಿದೆ’** (ವೇ. ಸೂ. ೨ ೧-೯) ಎಂದಿರು
ತ್ತದೆ. (ಆ) ದೃಷ್ಟಾಂತವು (ಯಾವದೆಂದರೆ) ದೇವತೆ, ಮನುಷ್ಯ -ಮುಂತಾದಶಬ್ದ
ಗಳಿಗೆ ವಾಚ್ಯನಾಗಿರುವ ಸಶರೀರಾತ್ಮನು ಮನುಷ್ಯನು, ಹುಡುಗನು, ಹರೆಯದವನು,
ಮುದುಕನು -ಎಂದು ಬಗೆಬಗೆಯ ಅವಸ್ಥೆಗಳನ್ನು ಹೊಂದಿದರೂ ಬಾಲತ್ವಯುವತ್ವ
ಸ್ಥವಿರತ್ವವೇ ಮುಂತಾದ **ಶರೀರದಲ್ಲಿರುವ ದೋಷಗಳು ಆತ್ಮನನ್ನು**
**ಸೋಂಕುವದಿಲ್ಲ ; ಆತ್ಮನಲ್ಲಿರುವ ಜ್ಞಾನಸುಖಾದಿಗಳು ಶರೀರವನ್ನು**
**ಸೋಂಕುವದಿಲ್ಲ** ಎಂಬುದೇ (ಆಗಿದೆ). ಆದ್ದರಿಂದ **ಕಾರ್ಯಾವಸ್ಥೆಯಲ್ಲಿ**
**ಯೂ ಕಾರಣಾವಸ್ಥೆಯಲ್ಲಿಯೂ ಇರುವ ಬ್ರಹ್ಮವು ಪ್ರತ್ಯಗಾತ್ಮನನ್ನು**
**ಶರೀರವಾಗುಳ್ಳದ್ದಾಗಿ ಅವನಿಗೆ ಆತ್ಮಭೂತವಾಗಿರುವದರಿಂದ ಪ್ರತ್ಯಗಾತ್ಮ**
**ವಾಚಿಯಾದ ಶಬ್ದದಿಂದ ಬ್ರಹ್ಮವನ್ನು ಹೇಳುವದಕ್ಕೂ ಆ ಶಬ್ದದ**
**ಸಾಮಾನಾಧಿಕರಣ್ಯವಿರುವದಕ್ಕೂ ಹೇತುವಿದೆ** ಎಂದು ತಿಳಿಸುವದಕ್ಕಾಗಿ (ಈ
ಸಂದರ್ಭದಲ್ಲಿ) ತಿರಸ್ಕರಿಸಬೇಕಾದ ಎರಡು ಮತಗಳನ್ನು ‘(ಪರಮಾತ್ಮಜ್ಞಾನದಿಂದ
ಸರ್ವಜ್ಞಾನವುಂಟಾಗುವದು ಎಂಬ) ಪ್ರತಿಜ್ಞೆಯು ಸಿದ್ಧವಾಗುವದಕ್ಕಾಗಿ (ಜೀವ
ಶಬ್ದದಿಂದ ಪರಮಾತ್ಮನನ್ನು ಹೇಳಿದೆ ! -ಎಂದು ಆಶ್ಮರಥ್ಯನು’ (ವೇ. ಸೂ. ೧-೪
-೨೦), ‘ಮುಕ್ತನಿಗೆ ಈ (ಪರಮಾತ್ಮ) ಭಾವವಿರುವದರಿಂದ (ಹೀಗೆ ಹೇಳಿದೆ) ಎಂದು

ಔಡುಲೋಮಿಯು'(ವೇ.ಸೂ. ೧-೪-೨೧)ಎಂದು ಮೊದಲು ಹೇಳಿ '(ಜೀವಾತ್ಮನಲ್ಲಿ ಆತ್ಮ) ನಾಗಿದ್ದುಕೊಂಡಿರುವದರಿಂದ) ಹೀಗೆ ಹೇಳಿದೆ ಎಂದು ಕಾಶಕೃತ್ಸ್ನನು' (ವೇ. ಸೂ. ೧-೪-೨೨) ಎಂಬ ಸಿದ್ಧಾಂತಸಮ್ಮತವಾದ ಹೇತುವನ್ನು ಹೇಳಿರುತ್ತದೆ. 'ಅದನ್ನು ಸೃಷ್ಟಿಸಿ ಅದನ್ನೇ ಅನುಪ್ರವೇಶಮಾಡಿದನು. ಅದನ್ನು ಒಳಹೊಕ್ಕು ಸತ್ತೂ ತ್ಯತ್ತೂ ಆದನು' (ತೈ. ೨-೬) ಎಂದು ಮುಂತಾಗಿರುವ (ವಾಕ್ಯದಿಂದ) ಪ್ರತ್ಯಗಾತ್ಮನು ಆತ್ಮನಾಗಿ ಇದ್ದುಕೊಂಡಿರುವದರಿಂದ ಬ್ರಹ್ಮವನ್ನು ಆ (ಪ್ರತ್ಯಗಾತ್ಮನನ್ನು ಹೇಳುವ) ಶಬ್ದದಿಂದ ತಿಳಿಸಿದೆ, ಅವನ ಸಮಾನಾಧಿಕರಣವಾಗಿಯೂ ಹೇಳಿದೆ ಎಂದು (ಈ ಸಿದ್ಧಾಂತಸೂತ್ರದಲ್ಲಿ) ಹೇಳಲಾಗಿದೆ.

(ಮೂಲ)

೮. ತಥಾ 'ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್' (ವೇ.ಸೂ. ೨-೧-೩೪), ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾದುಪಪದ್ಯತೇ ಚಾಪ್ಯುಪಲಭ್ಯತೇ ಚ' (ವೇ. ಸೂ. ೨-೧-೩೫) ಇತಿ ದೇವಮನುಷ್ಯಾದಿವಿಷಮಸೃಷ್ಟೇರ್ಜೀವಕರ್ಮನಿಮಿತ್ತತ್ವಮ್, ಜೀವಾನಾಂ ತತ್ತತ್ಕರ್ಮಪ್ರವಾಹಾಣಾಂ ಚಾನಾದಿತ್ವಂ ಪ್ರತಿಪಾದ್ಯ, ತದನಾದಿತ್ವಂ ಚ 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್' (ಶ್ವೇ. ೬-೧೩). 'ಜ್ಞಾಜ್ಞೌ ದ್ವಾ' (ಶ್ವೇ. ೧-೯) ಇತ್ಯಾದಿಶ್ರುತಿಷೂಪಲಭ್ಯತೇ ಇತ್ಯುಕ್ತ್ವಾ, ತದನಾದಿತ್ವೇಽಪಿ ಪ್ರಲಯಕಾಲೇ ಚಿದಚಿದ್ವಸ್ತುನೋರ್ಭೋಕ್ತೃಭೋಗ್ಯಯೋರ್ನಾಮರೂಪವಿಭಾಗಾಭಾವಾತ್ 'ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್' (ಐ. ೧-೧) ಇತ್ಯಾದಾವೇಕತ್ವಾವಧಾರಣಮ್ ಉಪಪದ್ಯತ ಇತಿ ಸೂತ್ರಕಾರೇಣ ಸ್ವಯಮೇವೋಕ್ತಮ್ ॥

(ಅರ್ಥ)

ಹಾಗೂ 'ಪಕ್ಷಪಾತವಾಗಲಿ ದಯಾಹೀನತೆಯಾಗಲಿ ಇಲ್ಲ, ಏಕೆಂದರೆ (ಸೃಷ್ಟಿಯು ಕರ್ಮ)ಸಾಪೇಕ್ಷವಾಗಿರುತ್ತದೆ' (ವೇ. ಸೂ. ೨-೧-೩೪), 'ಅವಿಭಾಗವಾಗಿರುವದರಿಂದ ಕರ್ಮವಿಲ್ಲ ಎಂದರೆ, ಹಾಗಲ್ಲ; ಅನಾದಿಯಾಗಿವೆ, (ಆದರೂ ಅವಿಭಾಗವು) ಹೊಂದಿಯೂಹೊಂದುತ್ತದೆ, ಕಂಡೂಬರುತ್ತದೆ' (ವೇ.ಸೂ. ೨-೧-೩೫) ಎಂಬ (ಸೂತ್ರಗಳಲ್ಲಿ) ದೇವತೆಗಳು, ಮನುಷ್ಯರು -ಮುಂತಾದ ವಿಷಮಸೃಷ್ಟಿಯನ್ನು ಮಾಡುವದು ಜೀವರುಗಳ ಕರ್ಮನಿಮಿತ್ತದಿಂದಲೆಂತಲೂ (ವೇ. ಸೂ. (-೧-೩೪) ಜೀವರುಗಳೂ ಅವರವರ ಕರ್ಮಪ್ರವಾಹಗಳೂ ಅನಾದಿಯೆಂತಲೂ (ವೇ. ಸೂ. ೨-೧-೩೫) ತಿಳಿಸಿಕೊಟ್ಟು, ಅವು ಅನಾದಿಯೆಂಬುದು 'ನಿತ್ಯರುಗಳಲ್ಲಿ ನಿತ್ಯನಾಗಿ ಚೇತನರುಗಳಲ್ಲಿ ಚೇತನನಾಗಿ' (ಶ್ವೇ. ೬-೧೩), 'ಜ್ಞ, ಅಜ್ಞ ಎಂದು ಇಬ್ಬರು (ಅಜರು)' (ಶ್ವೇ.೧-೯) ಮುಂತಾದ ಶ್ರುತಿಗಳಲ್ಲಿ ಕಾಣಬರುತ್ತದೆ ಎಂದು

ಹೇಳಿ ಅವು ಅನಾದಿಯಾದರೂ ಪ್ರಲಯಕಾಲವಲ್ಲಿ ಭೋಕ್ತೃಭೋಗ್ಯಗಳಾದ ಚಿದಚಿದ್ವಸ್ತುಗಳಿಗೆ ನಾಮರೂಪವಿಭಾಗವು ಇಲ್ಲದಿರುವದರಿಂದ 'ಇದು ಮೊದಲು ಆತ್ಮನೊಬ್ಬನೇ ಆಗಿತ್ತು, ಚೇತನವಾಗಿರುವದು ಮತ್ತೆಯಾವದೊಂದೂ ಇರಲಿಲ್ಲ' (ಐ. ೧-೧) ಎಂಬುದೇ ಮುಂತಾದ (ಶ್ರುತಿ)ಯಲ್ಲಿ ಒಂದೇ ಎಂದು ಒತ್ತಿಹೇಳಿರುವದು ಹೊಂದುತ್ತದೆ[1] ಎಂದು (ವೇ. ಸೂ. ೨-೨-೩೫) ಸೂತ್ರಕಾರನು ತಾನೇ ಹೇಳಿರುತ್ತಾನೆ.

(ಮೂಲ)

೯. ತಥಾ ಚ 'ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ' (ವೇ. ಸೂ. ೨-೩-೧೮) ಇತಿ ಪ್ರತ್ಯಗಾತ್ಮನೋ ನಿತ್ಯತ್ವಾತ್ ಅನುತ್ಪತ್ತಿಮುಕ್ತ್ವಾ, 'ಜ್ಞೋಽತ ಏವ' (ವೇ.ಸೂ. ೨-೩-೧೯) ಇತಿ ತಸ್ಯ ಜ್ಞಾತೃತ್ವಮೇವ ಸ್ವರೂಪಮ್ ಇತ್ಯುಕ್ತಮ್ । 'ಉತ್ಕ್ರಾನ್ತಿಗತ್ಯಾಗತೀನಾಮ್' (ವೇ. ಸೂ. ೨-೩-೨೦) ಇತ್ಯಾದಿನಾ ಅಣುತ್ವಂ ಚೋಕ್ತಮ್। 'ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್' (ವೇ.ಸೂ. ೨-೩ ೨೯), 'ಯಾವದಾತ್ಮಭಾವಿತ್ವಾಚ್ಚ ನ ದೋಷ ಸ್ತದ್ದರ್ಶನಾತ್' (ವೇ. ಸೂ. ೨-೩-೩೦) ಇತಿ ಜ್ಞಾತುರೇವಾಽಽತ್ಮನೋ ಜ್ಞಾನ ಶಬ್ದೇನ ವ್ಯಪದೇಶೋ ಜ್ಞಾನಗುಣಸಾರತ್ವಾತ್, ಜ್ಞಾನೈಕನಿರೂಪಣೀಯಸ್ವಭಾವ ತ್ವಾಚ್ಚ ಇತ್ಯುಕ್ತಮ್ । 'ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಙ್ಗೋಽನ್ಯತರನಿಯಮೋ ವಾಽನ್ಯಥಾ' (ವೇ. ಸೂ. ೨-೩-೩೨) ಇತಿ ಜ್ಞಾನಮಾತ್ರಸ್ವರೂಪಾತ್ಮವಾದೇ, ಹೇತ್ವನ್ತರಾಯತ್ತಜ್ಞಾನವಾದೇ, ಸರ್ವಗತಾತ್ಮವಾದೇ ಚ ದೋಷ ಉಕ್ತಃ। 'ಕರ್ತಾ ಶಾಸ್ತ್ರಾರ್ಥವತ್ತ್ವಾತ್' (ವೇ. ಸೂ. ೨-೩-೩೩), ಉಪಾದಾನಾದ್ವಿಹಾ ರೋಪದೇಶಾಚ್ಚ' (ವೇ. ಸೂ. ೨-೩-೩೪), 'ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ' (ವೇ. ಸೂ. ೨-೩-೩೫), 'ಉಪಲಬ್ಧಿವದನಿಯಮಃ' (ವೇ. ಸೂ. ೨-೩-೩೬), 'ಶಕ್ತಿವಿಪರ್ಯಯಾತ್' (ವೇ. ಸೂ. ೨-೩-೩೭), 'ಸಮಾಧ್ಯಭಾವಾಚ್ಚ' (ವೇ. ಸೂ. ೨-೩-೩೮), 'ಯಥಾ ಚ ತಕ್ಷೋಭಯಥಾ'

---

1. 'ಏಕಮೇವ' ಒಂದೇ -ಎಂದು ಒತ್ತಿಹೇಳಿರುವದು ಸತ್ತೊಂದೇ ಇತ್ತು, ಜೀವನು ಇರಲೇಇಲ್ಲ- ಎಂಬ ಅಭಿಪ್ರಾಯದಿಂದಲ್ಲ, ಮತ್ತೇನೆಂದರೆ ಕ್ಷೇತ್ರಜ್ಞರು ಬ್ರಹ್ಮದ ಶರೀರವು ಎಂದುಕೂಡ ಬೇರೆಯಾಗಿ ಹೇಳಿಸಿಕೊಳ್ಳಲಾರದಷ್ಟು ಅತಿಸೂಕ್ಷ್ಮವಾಗಿರುತ್ತಾರಾದ್ದರಿಂದ. ಆದ್ದರಿಂದ ಪ್ರಲಯಕಾಲವಲ್ಲಿ ಜೀವರಿರಲಿಲ್ಲವಾದ್ದರಿಂದ ಈಶ್ವರನಿಗೆ ವೈಷಮ್ಯಾದಿದೋಷವು ಬರುತ್ತದೆ ಯೆನ್ನುವದಕ್ಕಿಲ್ಲ -ಎಂದು ವೇ. ಸೂ. ೨-೨-೩೫ರಲ್ಲಿ ಹೇಳಿದೆ. ಆದ್ದರಿಂದ ಒಂದೇ ಆಗಿತ್ತು ಎಂದರೆ ನಾಮರೂಪವಿಭಾಗವಿರಲಿಲ್ಲ ಎಂದಿಷ್ಟೇ ಅರ್ಥ. ಇಲ್ಲಿ ಪರಾಮೃಷ್ಟವಾಗಿರುವ ಸೂತ್ರದ ಭಾಷ್ಯವನ್ನು ನೋಡಿರಿ.

(ವೇ. ಸೂ. ೨-೩-೩೯)- ಇತ್ಯಾತ್ಮನ ಏವ ಶುಭಾಶುಭೇಷು **ಕರ್ಮಸು** ಕರ್ತೃತ್ವಮ್, ಪ್ರಕೃತೇರಕರ್ತೃತ್ವಮ್, ಪ್ರಕೃತೇಶ್ಚ ಕರ್ತೃತ್ವೇ ತಸ್ಯಾಃ ಸಾಧಾರಣತ್ವೇನ ಸರ್ವೇಷಾಂ ಫಲಾನುಭವಪ್ರಸಙ್ಗ ಇತಿ ಚ ಪ್ರತಿಪಾದಿತಮ್। 'ಪರಾತ್ತು ತಚ್ಛ್ರುತೇಃ' (ವೇ. ಸೂ. ೨-೩-೪೦), 'ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ' (ವೇ. ಸೂ. ೨-೩-೪೧) ಇತ್ಯಾತ್ಮನ ಏವ ಕರ್ತೃತ್ವಂ ಪರಮಪುರುಷಾನುಮತಿಸಹಕೃತಮ್ ಇತ್ಯುಕ್ತಮ್ ॥

(ಅರ್ಥ)

ಮತ್ತು ಇದರಂತೆ 'ಆತ್ಮನು (ಹುಟ್ಟು)ವದಿಲ್ಲ, ಏಕೆಂದರೆ ಶ್ರುತಿಯಿದೆ; ಮತ್ತು ಆ (ಶ್ರುತಿ)ಗಳ ಪ್ರಮಾಣದಿಂದಲೇ (ಅವನು) ನಿತ್ಯನೂ ಆಗಿರುತ್ತಾನೆ' (ವೇ. ಸೂ. ೨-೩-೧೮) ಎಂದು **ಪ್ರತ್ಯಗಾತ್ಮನು** ನಿತ್ಯನಾಗಿರುವದರಿಂದ (ಅವನಿಗೆ) ಉತ್ಪತ್ತಿಯಿಲ್ಲವೆಂದು ಹೇಳಿ, 'ಆದ್ದರಿಂದಲೇ ಜ್ಞನು' (ವೇ. ಸೂ. ೨-೩-೧೯) ಎಂದು ಅವನಿಗೆ **ಜ್ಞಾತೃತ್ವವೇ ಸ್ವರೂಪವು** ಎಂದು ಹೇಳಲಾಗಿದೆ. 'ಉತ್ಕ್ರಾಂತಿ, ಗತಿ, ಆಗತಿ- ಇವುಗಳಿರುವದರಿಂದ (ಅಣು)' (ವೇ. ಸೂ. ೨-೩-೨೦) ಎಂದು ಮುಂತಾಗಿರುವ (ಸೂತ್ರಭಾಗ)ದಿಂದ **ಅಣುತ್ವವನ್ನು** ಹೇಳಿರುತ್ತದೆ. 'ಆ ಗುಣವು ಸಾರವಾಗಿರುವದರಿಂದ ಪ್ರಾಜ್ಞನಂತೆಯೇ (ಅವನನ್ನು) ಹಾಗೆಂದು ಕರೆದಿರುತ್ತದೆ' (ವೇ. ಸೂ. ೨-೩-೨೯), 'ಆತ್ಮನಲ್ಲೆಲ್ಲ ಇರುವದರಿಂದ ದೋಷವಿಲ್ಲ, ಏಕೆಂದರೆ ಅದು ಕಂಡುಬಂದಿರುತ್ತದೆ' (ವೇ. ಸೂ. ೨-೩-೩೦)- ಎಂದು ಜ್ಞಾತೃವಾದ ಆತ್ಮನನ್ನೇ **ಜ್ಞಾನವೆಂದು ಕರೆಯುವದು** ಜ್ಞಾನಗುಣವೇ (ಅವನಿಗೆ) ಸಾರವಾಗಿರುವದರಿಂದ, ಮತ್ತು ಜ್ಞಾನವೊಂದರಿಂದಲೇ ಅವನ ಸ್ವಭಾವವು ಗೊತ್ತಾಗತಕ್ಕದ್ದಾಗಿರುವದರಿಂದ ಎಂದು ಹೇಳಲಾಗಿದೆ. 'ಹೀಗಿಲ್ಲ ದಿದ್ದರೆ ನಿತ್ಯವೂ ಅರಿಯುವದು. ನಿತ್ಯವೂ ಅರಿಯದಿರುವದು -ಎಂಬ ಪ್ರಸಕ್ತಿ ಬರುತ್ತದೆ: ಅಥವಾ ಅವೆರಡರಲ್ಲಿ ಒಂದು ನಿಯಮದಿಂದಾಗುವದು' (ವೇ. ಸೂ. ೨-೩-೩೨) ಎಂದು ಜ್ಞಾನಮಾತ್ರವೇ ಆತ್ಮನ ಸ್ವರೂಪವೆಂಬ ವಾದದಲ್ಲಿಯೂ[1] (ಅವನಿಗೆ) ಮತ್ತೊಂದು ಕಾರಣದಿಂದ ಜ್ಞಾನ(ವುಂಟಾಗುವದೆಂಬ) ವಾದದಲ್ಲಿಯೂ, ಆತ್ಮರು ಸರ್ವಗತರೆಂಬ ವಾದದಲ್ಲಿಯೂ[2] ದೋಷವನ್ನು[3] ಹೇಳಲಾಗಿರುತ್ತದೆ. '(ಜೀವನು) ಕರ್ತೃವು, ಏಕೆಂದರೆ ಶಾಸ್ತ್ರವು ಸಾರ್ಥಕವಾಗಬೇಕಾಗಿದೆ' (ವೇ. ಸೂ.

---

1. ಸಿದ್ಧಾಂತದಲ್ಲಿ ಜ್ಞಾನವು ಆತ್ಮನ ಗುಣವೂ ಆಗಿದೆ; ಆತ್ಮನು ಬರಿಯ ಜ್ಞಾನ ಸ್ವರೂಪನಲ್ಲ.

2. ಕರಣಗಳಿಗಧೀನವಾಗಿ ಜ್ಞಾನವು ಉಂಟಾಗುತ್ತದೆ ಎಂಬವರ ವಾದದಲ್ಲಿ ಎಂದರ್ಥ.

3. ಆತ್ಮನು ಎಲ್ಲೆಲ್ಲಿಯೂ ಇದ್ದರೆ ಜ್ಞಾನವೇ ಅಥವಾ ಅಜ್ಞಾನವೇ ಆಗುವನು ಎಂಬುದು ದೋಷ.

೨-೩-೩೩), 'ತೆಗೆದುಕೊಳ್ಳುವದು, ವಿಹರಿಸುವದು– ಇವುಗಳನ್ನು (ಶ್ರುತಿಯಲ್ಲಿ) ಉಪದೇಶಿಸಿರುವದರಿಂದಲೂ' (ವೇ. ಸೂ. ೨-೩-೩೪), 'ಕ್ರಿಯೆಯಲ್ಲಿ (ಕರ್ತೃತ್ವ ವನ್ನು) ಉಪದೇಶಿಸಿರುವದರಿಂದಲೂ (ಕರ್ತೃ), ಹೀಗಲ್ಲದಿದ್ದರೆ (ವಿಭಕ್ತಿ) ನಿರ್ದೇಶವು ಬೇರೆಯಾಗುತ್ತಿತ್ತು' (ವೇ. ಸೂ. ೨-೩-೩೫), 'ಉಪಲಬ್ಧಿಯಂತೆ ನಿಯಮವಿಲ್ಲದೆಹೋಗುವದು' (ವೇ. ಸೂ. ೨-೩-೩೬), '(ಭೋಕ್ತೃತ್ವ) ಶಕ್ತಿಯು ಹೋಗಿಬಿಡುವದು' (ವೇ. ಸೂ. ೨-೩-೩೭), 'ಸಮಾಧಿಯು ಇಲ್ಲವಾಗುವದರಿಂದಲೂ' (ವೇ. ಸೂ. ೨-೩-೩೮), 'ಬಡಗಿಯು ಎರಡು ಬಗೆಯಿಂದಲೂ ಇರುವಂತೆಯೇ' (ವೇ. ಸೂ. ೨-೩-೩೯) ಎಂದು ಆತ್ಮನಿಗೇ ಒಳ್ಳೆಯಕೆಟ್ಟ ಕರ್ಮಗಳಲ್ಲಿ **ಕರ್ತೃತ್ವ**ವಿದೆಯೆಂದೂ ಪ್ರಕೃತಿಗೆ ಕರ್ತೃತ್ವವಿಲ್ಲವೆಂದೂ, ಪ್ರಕೃತಿಯೇ ಕರ್ತೃವಾದರೆ ಅದು ಎಲ್ಲರಿಗೂ ಸಮಾನವಾಗಿರುವದರಿಂದ ಎಲ್ಲರೂ ಫಲ ವನ್ನನುಭವಿಸಬೇಕಾಗಿಬಂದೀತು– ಎಂದು ಮುಂತಾಗಿ ಪ್ರತಿಪಾದಿಸಲಾಗಿದೆ.[1] 'ಆದರೆ (ಕರ್ತೃತ್ವವು) ಪರಮಾತ್ಮನ(ಧೀನ)ವಾಗಿದೆ, ಏಕೆಂದರೆ ಹಾಗೆಂದು ಶ್ರುತಿಯಿದೆ' (ವೇ. ಸೂ. ೨-೩-೪೦), '(ಜೀವ)ಕೃತಪ್ರಯತ್ನಕ್ಕೆ ತಕ್ಕಂತೆಯೇ (ಕರ್ಮಗಳನ್ನು) ಮಾಡಿಸುತ್ತಾನೆ ಎಂದು ವಿಹಿತಪ್ರತಿಷಿದ್ಧ(ಕರ್ಮಗಳು) ವ್ಯರ್ಥ ವಾಗದಿರುವದಕ್ಕಾಗಿ (ತಿಳಿಯಬೇಕು)' (ವೇ.ಸೂ. ೨-೩-೪೧) ಎಂದು ಕರ್ತೃತ್ವವು ಆತ್ಮನದೇ, **ಪರಮಪುರುಷನ ಅನುಮತಿ**ಯೂ ಅದಕ್ಕೆ ಸಹಕಾರಿ– ಎಂದು **ಹೇಳಲಾಗಿರುತ್ತದೆ.**

(ಮೂಲ)

೧೦. 'ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವ ಮಧೀಯತ ಏಕೇ' (ವೇ. ಸೂ. ೨-೩-೪೨), 'ಮನ್ತ್ರವರ್ಣಾತ್' (ವೇ. ಸೂ. ೨-೩-೪೩), 'ಅಪಿ ಸ್ಮರ್ಯತೇ' (ವೇ. ಸೂ. ೨-೩-೪೪), 'ಪ್ರಕಾಶಾದಿವತ್ತು ನೈವಂ ಪರಃ' (ವೇ. ಸೂ. ೨-೩-೪೫), 'ಸ್ಮರನ್ತಿ ಚ' (ವೇ. ಸೂ. ೨-೩-೪೬) ಇತಿ 'ಅನೀಶಯಾ ಶೋಚತಿ ಮುಹ್ಯಮಾನಃ। ಜುಷ್ಟಂ ಯದಾ ಪಶ್ಯತ್ಯನ್ಯಮೀಶ ಮಸ್ಯ ಮಹಿಮಾನಮಿತಿ ವೀತಶೋಕಃ' (ಮುಂ. ೩-೧-೨), 'ಕ್ಷರಂ ತ್ವವಿದ್ಯಾ ಹ್ಯಮೃತಂ ತು ವಿದ್ಯಾ ವಿದ್ಯಾವಿದ್ಯೇ ಈಶತೇ ಯಸ್ತು ಸೋಽನ್ಯಃ' (ಶ್ವೇ. ೫-೧). 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಞ್ಚನ ವೇದ ನಾನ್ತರಮ್' (ಬೃ. ೪-೩-೨೧), 'ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ' (ಮುಂ ೩-೧-೧), 'ಜ್ಞಾಜ್ಞೌ ದ್ವಾವಜಾವೀಶಾನೀಶೌ' (ಶ್ವೇ. ೧-೯).

---

1. ಇವೆಲ್ಲ ಆತ್ಮನು ಕರ್ತೃ ಎಂಬುವದಕ್ಕೆ ಹೇತುಗಳು ; ಮುಂದೆ ಆಯಾ ಸೂತ್ರಗಳ ವಿವರಣೆಯಿಂದ ಇದು ಸ್ಪಷ್ಟವಾಗುವದು.

‘ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ’ (ಶ್ವೇ. ೧-೬), ‘ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್। ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಞ್ಜನಃ ಪರಮಂ ಸಾಮ್ಯಮುಪೈತಿ’ (ಮುಂ. ೩-೧-೩), ‘ಸ ಕಾರಣಂ ಕರಣಾಧಿಪಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ’ (ಶ್ವೇ. ೬-೯), ‘ಯಃ ಸರ್ವಜ್ಞಃ ಸರ್ವವಿತ್’ (ಮುಂ. ೧-೧-೯), ‘ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ’ (ಶ್ವೇ. ೬-೮), ‘ನಿಷ್ಕಲಂ ನಿಷ್ಕ್ರಿಯಂ ಶಾನ್ತಂ ನಿರವದ್ಯಂ ನಿರಞ್ಜನಮ್’, (ಶ್ವೇ. ೬-೧೯), ‘ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್’ (ಶ್ವೇ. ೬-೧೩) ನಿತ್ಯಾನಾಂ ಚೇತನಾನಾಂ ಯ ಏಕಃ ನಿತ್ಯಶ್ಚೇತನಃ ಸ ಕಾಮಾನ್ವಿದಧಾತೀತ್ಯರ್ಥಃ[1] । ‘ಪತಿಂ ವಿಶ್ವಸ್ಯಾಽಽತ್ಮೇಶ್ವರಮ್’ (ತೈ. ನಾ. ೧೧) ಇತ್ಯಾದಿಷು ಪ್ರತ್ಯಗಾತ್ಮನಃ ಪರಮಾತ್ಮನಶ್ಚ ಕರ್ಮವಶ್ಯತ್ವೇನ ಶೋಚಿತೃತ್ವೇನ ಅಸರ್ವಜ್ಞತ್ವೇನ ಉಪಾಸನಾಯತ್ತಮುಕ್ತಿತ್ವೇನ, ನಿರವದ್ಯತ್ವೇನ ಸರ್ವಜ್ಞತ್ವೇನ ಸತ್ಯಸಙ್ಕಲ್ಪತ್ವೇನ ಸರ್ವೇಶ್ವರತ್ವೇನ ಸಮಸ್ತಕಲ್ಯಾಣಗುಣಾಕರತ್ವಾದಿನಾ ಚ ಸ್ವರೂಪಸ್ಯ ಸ್ವಭಾವಸ್ಯ ನಾನಾತ್ವವ್ಯಪದೇಶಾತ್ ತಯೋರೇವ ‘ತತ್ತ್ವಮಸಿ’ (ಛಾಂ. ೬-೮-೭), ‘ಅಯಮಾತ್ಮಾ ಬ್ರಹ್ಮ’ (ಬೃ. ೪-೪-೫), ‘ಯೋಽಸೌ ಸೋಽಹಂ ಯೋಽಹಂ ಸೋಽಸೌ’[2] (? ಐ. ಆ. ೨-೨-೪), ‘ಅಥ ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ’ (ಬೃ. ೧-೪-೧೦), ‘ಅಕೃತ್ಸ್ನೋ ಹ್ಯೇಷ..... ಆತ್ಮೇತ್ಯೇವೋಪಾಸೀತ’ (ಬೃ. ೧-೪-೭), ‘ಬ್ರಹ್ಮ ದಾಶಾ ಬ್ರಹ್ಮ ದಾಸಾ ಬ್ರಹ್ಮೇಮೇ ಕಿತವಾಃ’[3] (ಅಥ. ಬ್ರ. ಸೂ. ?) ಇತಿ ಚ ಸರ್ವಜೀವಾತ್ಮವ್ಯಾಪಿತ್ವೇನ

---

1. ಈ ಗದ್ಯವಾಕ್ಯವು ತೆ॥ ಪಾಠದಲ್ಲಿಲ್ಲ; ಇಲ್ಲದಿದ್ದರೂ ಆಗುತ್ತದೆ.

2. ಈ ವಾಕ್ಯವು ಐತರೇಯಾರಣ್ಯಕದಲ್ಲಿ ‘ತದ್ಯೋಽಹಂ ಸೋಽಸೌ ಯೋಽಸೌ ಸೋಽಹಮ್’ ಎಂದಿದೆ ; ಶ್ರೀಭಾಷ್ಯದಲ್ಲಿ ೩-೩-೩೭ (ಪು. ೩೧೩) ಹಾಗೆಯೇ ಅನುವಾದ ಮಾಡಿಕೊಂಡೂ ಇದೆ. ಆದ್ದರಿಂದ ಇಲ್ಲಿರುವ ಪಾಠವು ಬರೆದವರ ಕೈತಪ್ಪಿನಿಂದ ಬಿದ್ದಿರಬೇಕೆಂದು ಊಹಿಸಬೇಕಾಗಿದೆ.

3. ‘ಶಾಂಕರಭಾಷ್ಯದಲ್ಲಿ ‘ಬ್ರಹ್ಮೈವೇಮೇ’ ಎಂದಿದೆ. ಇದೇ ವಾಕ್ಯವು ಶ್ರೀಭಾಷ್ಯದಲ್ಲಿ (೧-೧-೪, ಪು. ೧೫೧) ‘ಬ್ರಹ್ಮೇಮೇ ದ್ಯಾವಾಪೃಥಿವೀ’ ಇತಿ ಪ್ರಕೃತ್ಯ ‘ಬ್ರಹ್ಮ ದಾಶಾ ಬ್ರಹ್ಮ ದಾಸಾ ಬ್ರಹ್ಮೇಮೇ ಕಿತವಾ ಉತ । ಸ್ತ್ರೀಪುಂಸೌ ಬ್ರಹ್ಮಣೋ ಜಾತೌ ಸ್ತ್ರಿಯೋ ಬ್ರಹ್ಮೋತ ವಾ ಪುಮಾನ್’ ಎಂದು ಪೂರ್ಣವಾಗಿದೆ. ಆಥರ್ವಣಿಕರ ಸಂಹಿತೋಪನಿಷತ್ತಿನಲ್ಲಿ ಬ್ರಹ್ಮಸೂಕ್ತದಲ್ಲಿ ಈ ವಾಕ್ಯವಿರುವದೆಂತ ಅಲ್ಲಿ ಹೇಳಿದೆ. ‘ಬ್ರಹ್ಮ ಮೇ’ ಎಂದು ಇಲ್ಲಿರುವದು ಬರೆದಿರುವ ಕೈತಪ್ಪಿನಿಂದ ಬಿದ್ದ ಪಾಠವೆಂದು ‘ಬ್ರಹ್ಮೇಮೇ’ ಎಂದೇ ತಿದ್ದಿಕೊಂಡಿದೆ.

ಅಭೇದವ್ಯಪದೇಶಾಚ್ಚ ಉಭಯವ್ಯಪದೇಶಾವಿರೋಧೇನ ಪರಮಾತ್ಮಾಂಶೋ ಜೀವಾತ್ಮೇತ್ಯಭ್ಯುಪಗನ್ತವ್ಯಮ್। ನ ಕೇವಲಂ ನ್ಯಾಯಸಿದ್ಧಮಿದಮ್, ಶ್ರುತಿ ಸ್ಮೃತಿಭ್ಯಾಂ ಚಾಂಶತ್ವಮುಕ್ತಂ ಜೀವಾತ್ಮನಃ। 'ಪಾದೋಽಸ್ಯ ವಿಶ್ವಾ ಭೂತಾನಿ' (ತೈ. ಆ. ೩-೧೨-೩೩), 'ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ' (ಗೀ. ೧೫-೭) ಇತಿ ॥

ಅಂಶತ್ವಂ ನಾಮ ಏಕವಸ್ತ್ವೇಕದೇಶತ್ವಮ್। ತಥಾ ಸತ್ಯುಭಯೋರೇಕ ವಸ್ತುತ್ವೇನ ಅವಿರೋಧೋ ನ ಸ್ಯಾತ್ ಇತ್ಯಾಶಙ್ಕ್ಯ 'ಪ್ರಕಾಶಾದಿವತ್ತು ನೈವಂ ಪರಃ' (ವೇ. ಸೂ. ೨-೩-೪೫) ಇತಿ ಪರಿಹರತಿ। ಅನ್ಯವಿಶೇಷಣತ್ವೈಕಸ್ವಭಾವ ಪ್ರಕಾಶಜಾತಿಗುಣಶರೀರವಿಶಿಷ್ಟಾನ್ ಅಗ್ನಿವ್ಯಕ್ತಿಗುಣ್ಯಾತ್ಮನಃ ಪ್ರತಿ ಪ್ರಕಾಶಜಾತಿ ಗುಣಶರೀರಾಣಾಂ ಯಥಾ ಅಂಶತ್ವಮ್, ಏವಂ ಪರಮಾತ್ಮಾನಂ ಪ್ರತ್ಯಗಾತ್ಮ ಶರೀರಕಂ ಪ್ರತಿ ಪ್ರತ್ಯಗಾತ್ಮನೋಽಂಶತ್ವಮ್। ಏವಮಂಶತ್ವೇ ಯತ್ಸ್ವಭಾವೋಽಂಶ ಭೂತೋ ಜೀವಃ ನೈವಮಂಶೀ ಪರಮಾತ್ಮಾ। ಸರ್ವತ್ರ ವಿಶೇಷಣವಿಶೇಷ್ಯಯೋಃ ಸ್ವರೂಪಸ್ವಭಾವಭೇದಾತ್। ಏವಂ ಚ 'ಕರ್ತಾ ಶಾಸ್ತ್ರಾರ್ಥವತ್ತ್ವಾತ್' (ವೇ. ಸೂ. ೨-೩-೩೩), 'ಪರಾತ್ತು ತಚ್ಛ್ರುತೇಃ' (ವೇ. ಸೂ. ೨-೩-೪೦) ಇತ್ಯನನ್ತರೋಕ್ತಂ ಚ ನ ವಿರುಧ್ಯತೇ। ಏವಂ ಪ್ರಕಾಶಶರೀರವಜ್ಜೀವಾತ್ಮನಾಮ್ ಅಂಶತ್ವಂ ಪರಾಶರಾದಯಃ ಸ್ಮರನ್ತಿ ಚ। 'ಏಕದೇಶಸ್ಥಿತಸ್ಯಾಗ್ನೇರ್ಜ್ಯೋತ್ಸ್ನಾ ವಿಸ್ತಾರಿಣೀ ಯಥಾ। ಪರಸ್ಯ ಬ್ರಹ್ಮಣಃ ಶಕ್ತಿಸ್ತಥೇದಮಖಿಲಂ ಜಗತ್' (ವಿ. ಪು. ೧-೨೨-೫೬), 'ಯತ್ಕಿಂಚಿತ್ ಸೃಜ್ಯತೇ ಯೇನ ಸತ್ತ್ವಜಾತೇನ ವೈ ದ್ವಿಜ! ತಸ್ಯ ಸೃಜ್ಯಸ್ಯ ಸಂಭೂತೌ ತತ್ಸರ್ವಂ ವೈ ಹರೇಸ್ತನುಃ॥' (ವಿ. ಪು. ೧-೨೨-೩೮) 'ತೇ ಸರ್ವೇ ಸರ್ವಭೂತಸ್ಯ ವಿಷ್ಣೋರಂಶಸಮುದ್ಭವಾಃ॥' (ವಿ.ಪು. ೧-೨೨-೨೦) ಅನ್ಯಥಾ ಪಾರಮಾರ್ಥಿಕಾಪಾರಮಾರ್ಥಿಕೋಪಾಧಿಸಮಾಶ್ರಯಣೇ ಪ್ರತ್ಯಗಾತ್ಮನೋಽಂಶತ್ವೇ ಬ್ರಹ್ಮಣ ಏವ ವೇದಾನ್ತನಿವರ್ತ್ಯಾಃ ಸರ್ವೇ ದೋಷಾ ಭವೇಯುರಿತಿ 'ಆಭಾಸಾ ಏವ ಚ' (ವೇ. ಸೂ. ೨-೩-೪೯) ಇತ್ಯಾದಿಸೂತ್ರೈ ರುಕ್ತಮ್ ॥

(ಅರ್ಥ)

'(ಜೀವನು) ಅಂಶವು. ಏಕೆಂದರೆ ಬೇರೆಬೇರೆಯೆಂದೂ ಹೇಳಿದೆ; ಬೇರೊಂದು (ಪ್ರಕಾರ)ವಾಗಿಯೂ ಬೆಸ್ತರು, ಜೂಜುಗಾರರು– ಮುಂತಾದ ರೂಪ ದಿಂದಲೂ ಕೆಲವರು ಅಧ್ಯಯನಮಾಡುತ್ತಿದಾರೆ' (ವೇ. ಸೂ. ೨-೩-೪೨). '(ಅಂಶವೆಂದು) ಮಂತ್ರವರ್ಣವಿದೆ' (ವೇ.ಸೂ. ೨-೩-೪೩), 'ಮತ್ತು ಸ್ಮೃತಿಯೂ ಇದೆ' (ವೇ. ಸೂ. ೨-೩-೪೪), 'ಆದರೆ ಪ್ರಕಾಶಾದಿಗಳಂತೆ (ಅಂಶವು), ಹೀಗೆ

ಪರಮಾತ್ಮನಿಲ್ಲ' (ವೇ. ಸೂ. ೨-೩-೪೫), '(ಪರಾಶರಾದಿಗಳು) ಸ್ಮರಿಸುತ್ತಲೂ ಇದ್ದಾರೆ' (ವೇ. ಸೂ. ೨-೩-೪೬) -ಎಂಬೀ (ಸೂತ್ರಗಳಲ್ಲಿ)—'ಅಶಕ್ತಿಯಿಂದ ಮೋಹಗೊಂಡು ಶೋಕಿಸುತ್ತಿರುವನು; ಸೇವಿಸಲ್ಪಟ್ಟ ಈಶ್ವರನು ಬೇರೆಯೆಂದು ಯಾವಾಗ ತಿಳಿದುಕೊಳ್ಳುವನೋ ಇವನ ಮಹಿಮೆಯೆಂದು ವೀತಶೋಕನಾಗುವನು' (ಮುಂ. ೩-೧-೨), 'ಅವಿದ್ಯೆಯು ಕ್ಷರವು. ವಿದ್ಯೆಯು ನಾಶವಿಲ್ಲದ್ದು; ವಿದ್ಯಾವಿದ್ಯೆಗಳೆರಡನ್ನೂ ಆಳುತ್ತಾನಲ್ಲ. ಅವನು ಅನ್ಯನೇ' (ಶ್ವೇ. ೫-೧), 'ಪ್ರಾಜ್ಞನಾದ ಪರಮಾತ್ಮನಿಂದ ಆಲಿಂಗಿತನಾಗಿ ಹೊರಗಿನ ಅಥವಾ ಒಳಗಿನ ಯಾವದೊಂದನ್ನೂ ಅರಿಯದೆ ಇರುತ್ತಾನೆ' (ಬೃ. ೪-೩-೨೧), 'ಅವುಗಳಲ್ಲಿ ಒಂದು (ಹಕ್ಕಿಯು) ರುಚಿಯಾದ ಪಿಪ್ಪಲವನ್ನು ತಿನ್ನುತ್ತಿರುವದು. ಇನ್ನೊಂದು ತಿನ್ನದೆ ನೋಡುತ್ತಿರುವದು' (ಮುಂ. ೩-೧-೧). 'ತಿಳಿದವನು, ಅಜ್ಞನು- ಎಂಬಿಬ್ಬರೂ ಜನ್ಮರಹಿತರು; ಒಬ್ಬನು ಈಶ್ವರನು, ಇನ್ನೊಬ್ಬನು ಅನೀಶ್ವರನು (ಹೀಗಿರುವರು)' (ಶ್ವೇ. ೧-೯), 'ಆತ್ಮನನ್ನೂ ಪ್ರೇರಕನನ್ನೂ ಬೇರೆಬೇರೆಯೆಂದು ತಿಳಿದು, ಅವನಿಂದ ಅನುಗೃಹೀತನಾಗಿ ಆ (ಭೇದಜ್ಞಾನ)ದಿಂದ ಅಮೃತತ್ವವನ್ನು ಪಡೆಯುತ್ತಾನೆ' (ಶ್ವೇ. ೧-೬), 'ಯಾವಾಗ ದ್ರಷ್ಟೃವೂ ಚಿನ್ನದ ವರ್ಣದವನೂ ಸಕಲಕರ್ತೃವೂ ಈಶ್ವರನೂ ಆದ ಬ್ರಹ್ಮವೆಂಬ ಜಗತ್ಕಾರಣವಾಗಿರುವ ಪುರುಷನನ್ನು ಕಾಣುವನೋ ಆಗ ಜ್ಞಾನಿಯು ಪುಣ್ಯಪಾಪಗಳನ್ನು ತೊಲಗಿಸಿಕೊಂಡು, ನಿರಂಜನನಾಗಿ ಪರಮಸಾಮ್ಯವನ್ನು ಹೊಂದುವನು' (ಮುಂ. ೩-೧-೩), 'ಆತನೇ ಕಾರಣವು, ಕರಣಾಧಿಪತಿಗಳಾದ (ಜೀವರಿಗೆ) ಅಧಿಪತಿಯು, ಈತನನ್ನು ಹುಟ್ಟಿಸುವವನು ಯಾರೊಬ್ಬನೂ ಇಲ್ಲ, ಇವನಿಗೆ (ಮತ್ತೊಬ್ಬ) ಅಧಿಪತಿಯೂ ಇಲ್ಲ' (ಶ್ವೇ. ೬-೯), 'ಯಾವನು ಸರ್ವಜ್ಞನೋ, ಸರ್ವವಿದನೋ' (ಮುಂ. ೧-೧-೯), 'ಈತನ ಸ್ವಾಭಾವಿಕವಾದ ಪರಶಕ್ತಿಯು ವಿವಿಧವಾಗಿಯೇ ಶ್ರುತಿಯಲ್ಲಿ ಹೇಳಲ್ಪಟ್ಟಿದೆ, (ಸ್ವಾಭಾವಿಕವಾದ) ಜ್ಞಾನಬಲಕ್ರಿಯೆಗಳೂ ಇವೆ' (ಶ್ವೇ. ೬-೮), 'ನಿಷ್ಕಲನು, ನಿಷ್ಕ್ರಿಯನು, ಶಾಂತನು, ನಿರ್ದೋಷನು, ನಿರಂಜನನು' (ಶ್ವೇ. ೬-೧೯), 'ನಿತ್ಯನಾಗಿ ನಿತ್ಯರಿಗೆ, ಚೇತನನಾಗಿ ಚೇತನರಿಗೆ, ಒಬ್ಬನಾಗಿ ಅನೇಕರಿಗೆ ಯಾವನು ಕಾಮಗಳನ್ನು ಹಂಚಿಕೊಡುತ್ತಿರುವನೋ' (ಶ್ವೇ. ೬-೧೩), ನಿತ್ಯರೂ ಚೇತನರೂ ಆದವರೊಳಗೆ ಯಾವನು ನಿತ್ಯನೂ ಚೇತನನೂ ಒಬ್ಬನೂ ಆಗಿರುತ್ತಾನೋ, ಅವನು ಕಾಮಗಳನ್ನು ಹಂಚುತ್ತಿರುವನು ಎಂದು (ಶ್ರುತಿಗೆ) ಅರ್ಥ.[1] 'ವಿಶ್ವಕ್ಕೆಲ್ಲ ಪತಿಯೂ ಆತ್ಮನೂ ಆದ ಈಶ್ವರನನ್ನು' (ತೈ. ನಾ. ೧೧)- ಇವೇ ಮುಂತಾದವುಗಳಲ್ಲಿ ಪ್ರತ್ಯಗಾತ್ಮನಿಗೂ ಪರಮಾತ್ಮನಿಗೂ-ಕರ್ಮವಶ್ಯನಾಗಿರುವದರಿಂದ ಶೋಕಿಸುತ್ತಿರುವದು, ಅಸರ್ವಜ್ಞನಾಗಿರುವದರಿಂದ ಉಪಾಸನೆಗೆ ಅಧೀನವಾಗಿ ಮುಕ್ತಿಯನ್ನು ಹೊಂದುವದು

1. ಇದು ಮೂಲದ ಗದ್ಯವಾಕ್ಯಕ್ಕೆ ಅರ್ಥ; ಇದಿಲ್ಲದ ಪಾಠಾಂತರವನ್ನು ಈ ಅನುವಾದವೇ ಬರುವಂತೆ ಮೂಲವನ್ನೇ ಕನ್ನಡಿಸಬೇಕಾಗುವದು.

(ಇವು ಜೀವನ ಸ್ವಭಾವ), ನಿರ್ದೋಷನಾಗಿರುವದು, ಸರ್ವಜ್ಞನಾಗಿರುವದು, ಸತ್ಯಸಂಕಲ್ಪನಾಗಿರುವದು, ಸರ್ವೇಶ್ವರನಾಗಿರುವದು, ಸಮಸ್ತಕಲ್ಯಾಣಗುಣಗಳಿಗೂ ಆಕರನಾಗಿರುವದು (ಇವು ಈಶ್ವರನ ಸ್ವಭಾವ)- ಇವೇ ಮುಂತಾದ ಬಗೆಯಿಂದ (ಇಬ್ಬರಿಗೂ)- ಸ್ವರೂಪವೂ ಸ್ವಭಾವವೂ ಬೇರೆಬೇರೆಯೆಂದು ತಿಳಿಸಿರುವದರಿಂದಲೂ, ಮತ್ತು ಆ ಇಬ್ಬರಿಗೇ, 'ಅದೇ ನೀನಾಗಿರುವೆ' (ಛಾಂ. ೬-೮-೭). 'ಈ ಆತ್ಮನು ಬ್ರಹ್ಮವು' (ಬೃ. ೪-೪-೫), 'ಅವನು ಯಾರೋ ಅವನೇ ನಾನು, ತಾನು ಯಾರೋ ಅವನೇ ಅವನು' (ಐ. ಆ. ೨-೨-೪)[1], 'ಇನ್ನು ಯಾವನು ಈ ದೇವತೆ ಬೇರೆ, ನಾನು ಬೇರೆ ಎಂದು ಅನ್ಯವಾದ ದೇವತೆಯನ್ನು ಉಪಾಸನೆ ಮಾಡುವನೋ, ಅವನು ಅರಿಯನು' (ಬೃ. ೧-೪-೧೦), 'ಇವನು ಅಪೂರ್ಣನಲ್ಲವೆ.....? ಆತ್ಮನು ಎಂದೇ ಉಪಾಸನೆಮಾಡಬೇಕು' (ಬೃ. ೧-೪-೭). 'ಬೆಸ್ತರು ಬ್ರಹ್ಮವೇ, ದಾಸರು ಬ್ರಹ್ಮವೇ, (ಮತ್ತು) ಈ ಜೂಜುಗಾರರು ಬ್ರಹ್ಮವೇ' (ಬ್ರ.ಸೂ. ಅಥ. ?) ಎಂದು (ಬ್ರಹ್ಮವು) ಸರ್ವಜೀವರುಗಳನ್ನೂ ವ್ಯಾಪಿಸಿಕೊಂಡಿರುವದರಿಂದ ಅಭೇದವನ್ನು ಹೇಳಿರುವದರಿಂದಲೂ (ಈ) ಎರಡು ಬಗೆಯ ಹೇಳಿಕೆಗಳಿಗೆ ಅವಿರೋಧವಾಗುವದಕ್ಕಾಗಿ ಜೀವಾತ್ಮನು ಪರಮಾತ್ಮನ **ಅಂಶ**ವೆಂದು ತಿಳಿಯಬೇಕು. ಇದು ಬರಿಯ ಯುಕ್ತಿಗಳಿಂದ ಸಿದ್ಧವಾಗಿರುವದಲ್ಲ; 'ಈತನಿಗೆ ಭೂತಗಳೆಲ್ಲ (ಒಂದು) ಪಾದವು' (ತೈ. ಆ. ೩-೧೨-೩೩), 'ಸನಾತನವಾದ ನನ್ನ ಅಂಶವೇ ಆಗಿರುವ ಜೀವನು ಜೀವಲೋಕದಲ್ಲಿ.....' (ಗೀ. ೧೫-೭)- ಎಂದು ಶ್ರುತಿಸ್ಮೃತಿಗಳೂ ಜೀವಾತ್ಮನು ಪರಮಾತ್ಮನ ಅಂಶವೆಂದು ತಿಳಿಸುತ್ತವೆ[2].

ಅಂಶವೆಂದರೆ ಒಂದೇ ವಸ್ತುವಿನ ಒಂದು ಭಾಗವು. ಹಾಗಾದರೆ ಈ (ಇಬ್ಬರೂ) ಒಂದೇ ವಸ್ತುವೆಂದಾಗಿ (ಈ ಇಬ್ಬರಿಗಿರುವ ಸ್ವರೂಪಸ್ವಭಾವಭೇದವು) ಅವಿರುದ್ಧವೆಂದಾಗುವದಿಲ್ಲವಲ್ಲ! ಎಂದು ಶಂಕಿಸಿ 'ಆದರೆ ಪ್ರಕಾಶಾದಿಗಳಂತೆ (ಅಂಶವು), ಪರಮಾತ್ಮನು ಹೀಗಿಲ್ಲ' (ವೇ.ಸೂ. ೨-೩-೪೫). ಎಂದು ಪರಿಹಾರವನ್ನು ಹೇಳಿರುತ್ತಾರೆ. ಮತ್ತೊಂದಕ್ಕೆ ವಿಶೇಷಣವಾಗಿರುವದೆಂಬುದೊಂದೇ ಸ್ವಭಾವವಾಗಿರುವ ಪ್ರಕಾಶ, ಜಾತಿ, ಗುಣ. ಶರೀರ- ಇವುಗಳಿಂದ ವಿಶಿಷ್ಟವಾಗಿರುವ **ಬೆಂಕಿ, ವ್ಯಕ್ತಿ, ಗುಣಿ, ಆತ್ಮ, ಇವರುಗಳಿಗೆ ಪ್ರಕಾಶ, ಜಾತಿ, ಗುಣ,**

---

1. 'ಆದ್ದರಿಂದ ಈ ನಾನು ಯಾರೋ ಅವನೂ ಅವನೇ, ಅವನು ಯಾವನೋ ನಾನೂ ಅವನೇ' ಎಂದು ಐತರೇಯಾರಣ್ಯಕದಲ್ಲಿರುವಂತೆ ವಾಕ್ಯಕ್ಕೆ ಅರ್ಥ. ಮೂಲದ ಟಿಪ್ಪಣಿಯನ್ನು ನೋಡಿ.

2. ಇಲ್ಲಿಯವರೆಗೆ 'ಅಂಶೋ ನಾನಾವ್ಯಪದೇಶಾತ್', 'ಮಂತ್ರವರ್ಣಾತ್', 'ಅಪಿ ಸ್ಮರ್ಯತೇ' -ಎಂಬ ಸೂತ್ರಗಳ ಅಭಿಪ್ರಾಯವನ್ನು ವಿವರಿಸಿದ್ದಾಯಿತು. ಇನ್ನುಮುಂದೆ 'ಪ್ರಕಾಶಾದಿವತ್ತು ನೈವಂ ಪರಃ', 'ಸ್ಮರಂತಿ ಚ' -ಎಂಬ ಎರಡು ಸೂತ್ರಗಳ ಅಭಿಪ್ರಾಯವನ್ನು ವಿವರಿಸುವನು.

**ಶರೀರ- ಇವುಗಳು ಹೇಗೆ ಅಂಶವೋ, ಹಾಗೆಯೇ ಪ್ರತ್ಯಗಾತ್ಮಶರೀರಕನಾದ ಪರಮಾತ್ಮನಿಗೆ ಪ್ರತ್ಯಗಾತ್ಮನು ಅಂಶವು.** ಹೀಗೆ ಅಂಶವಾಗಿರುವದರಿಂದ ಅಂಶವಾಗಿರುವ ಜೀವನು ಯಾವ ಸ್ವಭಾವದವನೋ ಅಂಶಿಯಾದ ಪರಮಾತ್ಮನು ಹೀಗೇ (ಈ ಸ್ವಭಾವದವನೇ) ಅಲ್ಲ; ಏಕೆಂದರೆ **ಎಲ್ಲೆಲ್ಲಿಯೂ ವಿಶೇಷಣವಿಶೇಷ್ಯಗಳಿಗೆ ಸ್ವರೂಪಸ್ವಭಾವಗಳು ಬೇರೆಬೇರೆಯಾಗಿಯೇ ಇರುತ್ತವೆ.** ಮತ್ತು ಹೀಗಿರುವದರಿಂದ '(ಜೀವನು) ಕರ್ತೃವು ಏಕೆಂದರೆ ಶಾಸ್ತ್ರವು ಸಾರ್ಥಕವಾಗಬೇಕಾಗಿದೆ' (ವೇ. ಸೂ. ೨-೩-೩೩), 'ಆದರೆ (ಕರ್ತೃತ್ವವು) ಪರಮಾತ್ಮನ ಅಧೀನವಾಗಿದೆ, ಏಕೆಂದರೆ ಹೀಗೆಂದು ಶ್ರುತಿಯಿದೆ' (ವೇ. ಸೂ. ೨-೩-೪೦) ಎಂದು ಇವರ ಹಿಂದೆ ಹೇಳಿರುವದಕ್ಕೂ ವಿರೋಧವಾಗುವದಿಲ್ಲ. ಹೀಗೆ ಪ್ರಕಾಶ, ಶರೀರ- ಇವುಗಳಂತೆ ಜೀವಾತ್ಮರುಗಳು (ಪರಮಾತ್ಮನ) ಅಂಶವೆಂಬುದನ್ನು **ಪರಾಶರನೇ** ಮೊದಲಾದವರು ಸ್ಮರಿಸಿಯೂ ಇರುತ್ತಾರೆ. 'ಒಂದು ಕಡೆಯಿರುವ ಬೆಂಕಿಯ ಬೆಳಕು ಹೇಗೆ (ಎಲ್ಲೆಲ್ಲಿಯೂ) ಹರಡಿಕೊಂಡಿರುತ್ತದೆಯೋ ಹಾಗೆಯೇ ಪರಬ್ರಹ್ಮದ ಶಕ್ತಿಯು ಈ ಜಗತ್ತೆಲ್ಲವನ್ನೂ (ವ್ಯಾಪಿಸಿಕೊಂಡಿರುತ್ತದೆ)' (ವಿ. ಪು. ೧-೨೨-೫೬), 'ಯಾವದೊಂದಿಷ್ಟು ಯಾವದೊಂದು ಸತ್ತ್ವಜಾತದಿಂದ ಸೃಷ್ಟಿಸಲ್ಪಡುತ್ತಿರುವದೋ, ಎಲೈ ದ್ವಿಜನೆ,[1] ಆ ಸೃಜ್ಯವಸ್ತುವು ಹುಟ್ಟುವಲ್ಲಿ (ಕಾರಣವಾದ) ಆ (ಸತ್ತ್ವಜಾತ)ವೆಲ್ಲವೂ ಹರಿಯ ತನುವೇ' (ವಿ. ಪು. ೧-೨೨-೩೮), 'ಆ (ಪರಿಪಾಲಕ)ರೆಲ್ಲರೂ ಸರ್ವವೂ ಆಗಿರುವ ವಿಷ್ಣುವಿನ ಅಂಶದಿಂದ ಹುಟ್ಟಿದವರೇ' (ವಿ. ಪು. ೧-೨೨-೨೦). ಹೀಗಲ್ಲದೆ ಪರಮಾರ್ಥವಾದ ಮತ್ತು ಅಪರಮಾರ್ಥವಾದ ಉಪಾಧಿಗಳನ್ನು ಆಶ್ರಯಿಸಿ ಜೀವನು (ಪರಮಾತ್ಮನ) ಅಂಶವು ಎಂದರೆ[2] ವೇದಾಂತ(ಜ್ಞಾನ)ದಿಂದ ತೊಲಗಿಸಿಕೊಳ್ಳಬೇಕಾದ ದೋಷಗಳೆಲ್ಲವೂ ಬ್ರಹ್ಮಕ್ಕೇ ಆಗುವವು ಎಂದು '(ಆ ಪಕ್ಷಗಳ ಹೇತುಗಳು) ಆಭಾಸವೇ (ಆಗಿರುವವು)' (ವೇ. ಸೂ. ೨-೩-೪೯) ಮುಂತಾದ ಸೂತ್ರಗಳಿಂದ ಹೇಳಿರುತ್ತದೆ.

(ಮೂಲ)

೧೧. ಅತಃ ಸರ್ವದಾ ಚಿದಚಿದ್ವಸ್ತುಶರೀರತಯಾ ತದಾತ್ಮಭೂತಮೇವ ಬ್ರಹ್ಮ। ಕದಾಚಿದವಿಭಕ್ತನಾಮರೂಪಚಿದಚಿದ್ವಸ್ತುಶರೀರಂ ತತ್ಕಾರಣಾವಸ್ಥಮ್, ಕದಾಚಿಚ್ಚ ವಿಭಕ್ತನಾಮರೂಪಚಿದಚಿದ್ವಸ್ತುಶರೀರಂ ತತ್ಕಾರ್ಯಾವಸ್ಥಂ ಬ್ರಹ್ಮ। ಸರ್ವದಾ ಚಿದಚಿದ್ವಸ್ತುಶರೀರತಯಾ ತದ್ವಿಶಿಷ್ಟತ್ವೇಽಪಿ ಬ್ರಹ್ಮಣಃ ಪರಿಣಾಮಿತ್ವಾಪುರುಷಾರ್ಥಾಶ್ರಯತ್ವೇ ಶರೀರಭೂತಚೇತನಾಚೇತನವಸ್ತುಗತೇ। ಆತ್ಮಭೂತಂ

---

1. ಮೈತ್ರೇಯನನ್ನು ಸಂಬೋಧಿಸಿ ಪರಾಶರರು ಹೇಳಿದ ವಾಕ್ಯವಿದು.

2. ಪರಮಾರ್ಥೋಪಾಧಿಯನ್ನು ಒಪ್ಪುವವರು ಭಾಸ್ಕರಾಚಾರ್ಯರ ಅನುಯಾಯಿಗಳು; ಅಪರಮಾರ್ಥವಾದ ಉಪಾಧಿಯನ್ನು ಒಪ್ಪುವವರು ಶಂಕರಾನುಯಾಯಿಗಳು.

ಬ್ರಹ್ಮ ಸರ್ವದಾ ನಿರಸ್ತನಿಖಿಲದೋಷಗನ್ಧಾನವಧಿಕಾತಿಶಯಾಸಂಖ್ಯೇಯ ಜ್ಞಾನಾನನ್ದಾದ್ಯಪರಿಮಿತೋದಾರಗುಣಸಾಗರಮ್ ಅವತಿಷ್ಠತ ಇತಿ ಬ್ರಹ್ಮೈವ ಜಗನ್ನಿಮಿತ್ತಮ್ ಉಪಾದಾನಂ ಚೇತಿ 'ಯತೋ ವಾ ಇಮಾನಿ' (ತೈ. ೩-೧) ಇತ್ಯಾದಿವಾಕ್ಯಂ ಪ್ರತಿಪಾದಯತ್ಯೇವೇತಿ 'ಜನ್ಮಾದ್ಯಸ್ಯ ಯತಸ್ತದ್ಬ್ರಹ್ಮ' ಇತಿ ಸುಷ್ಠೂಕ್ತಮ್। 'ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್' (ಛಾಂ. ೬-೨-೧), 'ತದೈಕ್ಷತ ಬಹು ಸ್ಯಾಂ ಪ್ರಜಾಯೇಯ' (ಛಾಂ. ೬-೨-೩) ಇತ್ಯಸ್ಯ ಚಾಯಮರ್ಥಃ। 'ಯಸ್ಯಾऽऽತ್ಮಾ ಶರೀರಮ್' (ಬೃ. ಮಾ. ೩-೭-೩೦). 'ಯಸ್ಯಾಕ್ಷರಂ ಶರೀರಮ್', 'ಯಸ್ಯ ಪೃಥಿವೀ ಶರೀರಮ್', 'ಯಸ್ಯಾವ್ಯಕ್ತಃ ಶರೀರಮ್'[1], 'ಏಷ ಸರ್ವಭೂತಾನ್ತರಾತ್ಮಾऽಪಹತಪಾಪ್ಮಾದಿವ್ಯೋ ದೇವ ಏಕೋ ನಾರಾಯಣಃ' (ಸು. ೭) ಇತ್ಯಾದಿಶ್ರುತೇರ್ಬ್ರಹ್ಮಣಃ ಸರ್ವದಾ ಚಿದಚಿದ್ವಸ್ತು ಶರೀರಕತ್ವಾತ್, ಸದೇವೇದಮಿದಾನೀಂ ಸ್ಥೂಲಚಿದಚಿದ್ವಸ್ತುಶರೀರಕತ್ವೇನ ವಿಭಕ್ತನಾಮರೂಪಮ್, ಅಗ್ರೇ ಪ್ರಲಯಕಾಲೇ ಸೂಕ್ಷ್ಮದಶಾಪನ್ನಚಿದಚಿದ್ವಸ್ತು ಶರೀರತಯಾ ನಾಮರೂಪವಿಭಾಗಾನರ್ಹಮೇಕಮೇವಾಸೀತ್ । ಸ್ವಯಮೇವ ಬ್ರಹ್ಮ ಸರ್ವಜ್ಞಂ ಸರ್ವಶಕ್ತಿ ನಿಮಿತ್ತಾನ್ತರಾನಪೇಕ್ಷಮದ್ವಿತೀಯಂ ಚಾತಿಷ್ಠತ್। ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತನ್ನಾಮರೂಪವಿಭಾಗಾನರ್ಹಸೂಕ್ಷ್ಮ ಚಿದಚಿದ್ವಸ್ತುಶರೀರಕತಯಾ ಏಕಮೇವಾವಸ್ಥಿತಂ ನಾಮರೂಪವಿಭಾಗಾರ್ಹಸ್ಥೂಲ ದಶಾಪತ್ತ್ಯಾ ಬಹುಪ್ರಕಾರಂ ಸ್ಯಾಮ್ ಇತಿ ಐಕ್ಷತ। ಸ್ಯಾಮ್, ಪ್ರಜಾಯೇಯ ಇತಿ ವ್ಯಷ್ಟಿಸಮಷ್ಟಿವ್ಯಪದೇಶಃ । ಚಿದಚಿತೋಃ ಪರಸ್ಯ ಚ ಪ್ರಲಯಕಾಲೇऽಪಿ ವ್ಯವಹಾರಾನರ್ಹಸೂಕ್ಷ್ಮಭೇದಃ ಸರ್ವವೇದಾನ್ತಿಭಿರಭ್ಯುಪಗತಃ। ಅವಿದ್ಯಾಕೃತ ಭೇದಸ್ಯ ಉಪಾಧಿಕೃತಭೇದಸ್ಯ ಚಾನಾದಿತ್ವಾಭ್ಯುಪಗಮಾತ್ । ಇಯಾಂಸ್ತು ವಿಶೇಷಃ। ಬ್ರಹ್ಮೈವಾಜ್ಞಮ್ ಉಪಾಧಿಸಂಬದ್ಧಂ ಚೇತಿ ಸರ್ವಶ್ರುತಿಸ್ಮೃತಿ ನ್ಯಾಯವಿರೋಧೋऽನ್ಯೇಷಾಮ್ । ತದಭಾವಾದವಿರೋಧಶ್ಚಾಸ್ಮಾಕಮಿತಿ ॥

(ಅರ್ಥ)

ಆದ್ದರಿಂದ ಯಾವಾಗಲೂ ಚಿದಚಿದ್ವಸ್ತುಗಳನ್ನು ಶರೀರವಾಗುಳ್ಳದ್ದಾಗಿರುವದರಿಂದ ಅವಕ್ಕೆ ಬ್ರಹ್ಮವು ಆತ್ಮಭೂತವಾಗಿಯೇ ಇರುತ್ತದೆ. ಕೆಲವು ವೇಳೆ ಬ್ರಹ್ಮವು ನಾಮರೂಪಗಳು ವಿಭಕ್ತವಾಗದಿರುವ ಚಿದಚಿದ್ವಸ್ತುಗಳ ಶರೀರವುಳ್ಳದ್ದಾಗಿ ಅವುಗಳ ಕಾರಣಾವಸ್ಥವುಳ್ಳದ್ದಾಗಿರುತ್ತದೆ, ಮತ್ತು ಕೆಲವು ವೇಳೆ ನಾಮ

---

1. ಸುಬಾಲೋಪನಿಷತ್ತಿನ ಏಳನೆಯ ಖಂಡದಲ್ಲಿ ವಾಕ್ಯಗಳು ಈ ಕ್ರಮದಲ್ಲಿವೆ; "ಯಸ್ಯ ಪೃಥಿವೀ ಶರೀರಮ್ ಯಸ್ಯಾಪಃ....ಯಸ್ಯ ತೇಜಃ....ಯಸ್ಯ ವಾಯುಃ ...ಯಸ್ಯಾऽऽಕಾಶಃ....ಯಸ್ಯ ಮನಃ....ಯಸ್ಯ ಬುದ್ಧಿಃ.... ಯಸ್ಯಾಹಙ್ಕಾರಃ ... ಯಸ್ಯ ಚಿತ್ತಂ.... ಯಸ್ಯಾವ್ಯಕ್ತಂ....ಯಸ್ಯಾಕ್ಷರಂ....ಯಸ್ಯ ಮೃತ್ಯುಃ ...ಸ ಏಷ ॥"

ರೂಪಗಳು ವಿಭಕ್ತವಾಗಿರುವ ಚಿದಚಿದ್ವಸ್ತುಗಳ ಶರೀರವುಳ್ಳದ್ದಾಗಿ ಅವುಗಳ ಕಾರ್ಯಾವಸ್ಥೆಯುಳ್ಳದ್ದಾಗಿರುತ್ತದೆ. ಯಾವಾಗಲೂ ಚಿದಚಿದ್ವಸ್ತುಗಳೆಂಬ ಶರೀರವುಳ್ಳದ್ದೇ ಆಗಿ ಅವುಗಳಿಂದ ವಿಶಿಷ್ಟವೇ ಆಗಿರುತ್ತದೆಯಾದರೂ (ಆ) ಬ್ರಹ್ಮದ ಪರಿಣಾಮಿತ್ವವೂ ಅಪುರುಷಾರ್ಥಾಶ್ರಯತ್ವವೂ (ಅದಕ್ಕೆ) ಶರೀರವಾಗಿರುವ ಚೇತನಾಚೇತನವಸ್ತುಗಳಿಗೇ ಸೇರಿಕೊಂಡಿರುತ್ತವೆ. ಆತ್ಮಭೂತವಾದ ಬ್ರಹ್ಮವು ಯಾವಾಗಲೂ ಯಾವ ದೋಷದ ವಾಸನೆಯೂ ಇಲ್ಲದೆ, ಇನ್ನಿಲ್ಲವೆನ್ನುವಷ್ಟು ಹೆಚ್ಚಿನ ಲೆಕ್ಕವಿಲ್ಲದಷ್ಟು ಜ್ಞಾನಾನಂದಾದಿಯಾದ ಅಪರಿಮಿತವಾದ ಉದಾರಗುಣಗಳ ಸಾಗರವಾಗಿಯೇ ಇದ್ದುಕೊಂಡಿರುತ್ತದೆ. ಆದ್ದರಿಂದ (ಹೀಗೆ) ಬ್ರಹ್ಮವೇ ಜಗತ್ತಿಗೆ ನಿಮಿತ್ತವೂ ಉಪಾದಾನವೂ (ಆಗಿರುತ್ತದೆ) ಎಂದು 'ಯಾವುದರಿಂದಲೇ ಈ ಭೂತಗಳು ಹುಟ್ಟುವವೋ' (ತೈ. ೩-೧) ಎಂದು ಮುಂತಾಗಿರುವ ವಾಕ್ಯವು ಪ್ರತಿಪಾದಿಸಿಯೇ ಪ್ರತಿಪಾದಿಸುತ್ತದೆಯಾಗಿ 'ಈ (ಪ್ರಪಂಚಕ್ಕೆ) ಜನ್ಮಾದಿಗಳು ಯಾವದರಿಂದ ಆಗುವವೋ ಅದು ಬ್ರಹ್ಮವು' ಎಂದು (ಸೂತ್ರದಲ್ಲಿ) ಹೇಳಿದ್ದು ಸರಿಯಾಗಿರುತ್ತದೆ. 'ಅಪ್ಪ, ಇದು ಮೊದಲು ಒಂದೇ ಆಗಿ ಎರಡನೆಯದಿಲ್ಲದ ಸತ್ತೇ ಆಗಿತ್ತು' (ಛಾಂ. ೬-೨-೧), 'ಅದು ಬಹುವಾಗುವೆನು. ಹುಟ್ಟುವೆನು ಎಂದು ಯೋಚಿಸಿತು' (ಛಾಂ. ೬-೨-೩) ಎಂಬೀ ವಾಕ್ಯಕ್ಕೆ ಇದು ಅರ್ಥವು: 'ಯಾವನಿಗೆ ಆತ್ಮನು ಶರೀರವೋ' (ಬೃ. ಮಾ. ೩-೭-೩೦). 'ಯಾವನಿಗೆ ಅಕ್ಷರವು ಶರೀರವೋ ಯಾವನಿಗೆ ಪೃಥಿವಿಯು ಶರೀರವೋ. ಯಾವನಿಗೆ ಅವ್ಯಕ್ತವು ಶರೀರವೋ .....ಇವನು ಸರ್ವಭೂತಗಳಿಗೂ ಅಂತರಾತ್ಮನಾದ ಪಾಪಗಳಿಲ್ಲದವನೂ ಆದ ದಿವ್ಯನಾದ ದೇವನು, ತಾನೊಬ್ಬನೇ ಆಗಿರುವ ನಾರಾಯಣನು'[1] (ಸು. ೭) -ಮುಂತಾದ ಶ್ರುತಿಪ್ರಮಾಣದಿಂದ ಬ್ರಹ್ಮವು ಯಾವಾಗಲೂ ಚಿದಚಿದ್ವಸ್ತುಶರೀರಕವೇ ಆಗಿರುವದರಿಂದ ಈಗ ಸ್ಥೂಲವಾಗಿರುವ ಚಿದಚಿದ್ವಸ್ತುಶರೀರವುಳ್ಳದ್ದಾಗಿ ನಾಮರೂಪಗಳು ವಿಂಗಡವಾಗಿರುವ ಸತ್ತೇ, ಮೊದಲು ಎಂದರೆ ಪ್ರಲಯಕಾಲದಲ್ಲಿ ಸೂಕ್ಷ್ಮಾವಸ್ಥೆಯನ್ನು ಹೊಂದಿದ ಚಿದಚಿದ್ವಸ್ತುಶರೀರವುಳ್ಳದ್ದಾಗಿ ನಾಮರೂಪಗಳ ವಿಭಾಗಕ್ಕೆ ಅರ್ಹವಲ್ಲದೆ ಒಂದೇ ಇದ್ದುಕೊಂಡಿತ್ತು. ಸರ್ವಜ್ಞವೂ ಸರ್ವಶಕ್ತಿಗಳುಳ್ಳದ್ದೂ ಆಗಿ ಮತ್ತೊಂದು ನಿಮಿತ್ತವನ್ನು ಬಯಸದೆ ಎರಡನೆಯದಿಲ್ಲದ್ದೂ ಆಗಿ ಬ್ರಹ್ಮವು ತಾನೇ ಇದ್ದುಕೊಂಡಿತ್ತು. ಅದು 'ಬಹುವಾಗುವೆನು, ಹುಟ್ಟುವೆನು' -ಎಂದರೆ ನಾಮರೂಪವಿಭಾಗಕ್ಕೆ ಅರ್ಹವಲ್ಲದ ಸೂಕ್ಷ್ಮಚಿದಚಿದ್ವಸ್ತುಶರೀರವುಳ್ಳದ್ದಾಗಿ ತಾನೊಂದೇ ಇದ್ದುಕೊಂಡಿದ್ದ ಅದು ನಾಮರೂಪವಿಭಾಗಕ್ಕೆ ತಕ್ಕ ಸ್ಥೂಲದಶೆಯನ್ನು ಹೊಂದಿ ಬಹುಪ್ರಕಾರವಾಗುವೆನು ಎಂದು ಯೋಚಿಸಿ ನೋಡಿಕೊಂಡಿತು.

---

1. ಇಲ್ಲಿ ಸುಬಾಲೋಪನಿಷತ್ತಿನ ಮೂಲದ ಅನುಕ್ರಮಕ್ಕನುಗುಣವಾಗಿ ಕನ್ನಡಿಸಿಲ್ಲ, ಮೂಲವಾಕ್ಯದ ಟಿಪ್ಪಣಿಯನ್ನು ನೋಡಿರಿ.

ಇಲ್ಲಿ 'ಆಗುವೆನು', 'ಹುಟ್ಟಿಸುವೆನು' ಎಂದು (ಕ್ರಮವಾಗಿ) ವ್ಯಷ್ಟಿಸಮಷ್ಟಿಗಳನ್ನು ಹೇಳಿರುತ್ತದೆ.

**ಚಿದಚಿತ್ತುಗಳಿಗೂ ಪರಮಾತ್ಮನಿಗೂ ಪ್ರಲಯಕಾಲದಲ್ಲಿಯೂ ವ್ಯವಹಾರಕ್ಕೆ ತಕ್ಕದ್ದಾಗದಿರುವ ಸೂಕ್ಷ್ಮವಾದ ಭೇದವು ಇದ್ದುಕೊಂಡಿರುವದೆಂಬುದನ್ನು ಎಲ್ಲಾ ವೇದಾಂತಿಗಳೂ ಒಪ್ಪಿಕೊಂಡಿರುತ್ತಾರೆ. ಏಕೆಂದರೆ ಅವಿದ್ಯೆಯಿಂದಾಗಿರುವ ಭೇದವೂ ಉಪಾಧಿಯಿಂದಾಗಿರುವ ಭೇದವೂ ಅನಾದಿ ಎಂದು (ಅವರು) ಇಟ್ಟುಕೊಂಡಿರುತ್ತಾರೆ. ಆದರೆ ಇಷ್ಟು ವಿಶೇಷವುಂಟು. ಬ್ರಹ್ಮವೇ ಅಜ್ಞಾನಿಯು, ಉಪಾಧಿಗಳ ಸಂಬಂಧವುಳ್ಳದ್ದು –ಎಂದು (ಒಪ್ಪುವದರಿಂದ) ಮಿಕ್ಕ ವಾದಿಗಳಿಗೆ ಸರ್ವಶ್ರುತಿಸ್ಮೃತಿವಿರೋಧವೂ ಯುಕ್ತಿವಿರೋಧವೂ ಇರುತ್ತದೆ, ಅದಿಲ್ಲದ್ದರಿಂದ ನಮಗೆ (ಆ) ವಿರೋಧವಿರುವದಿಲ್ಲ, (ಅಷ್ಟೆ). ॥ ೨ ॥**

## ಶಾಸ್ತ್ರಯೋನಿತ್ವಾಧಿಕರಣ

### ೩. ಶಾಸ್ತ್ರಯೋನಿತ್ವಾತ್ (೧-೧-೩)

(ಮೂಲ)

೧೨. ಏವಂ ಚಿದಚಿದ್ವಸ್ತುಶರೀರತಯಾ ತದ್ವಿಶಿಷ್ಟಸ್ಯ ಬ್ರಹ್ಮಣ ಏವ ಜಗದುಪಾದಾನತ್ವಂ ನಿಮಿತ್ತತ್ವಂ ಚ ನಾನುಮಾನಗಮ್ಯಮಿತಿ[1] ಶಾಸ್ತ್ರೈಕಪ್ರಮಾಣಕತ್ವಾತ್ತಸ್ಯ 'ಯತೋ ವಾ ಇಮಾನಿ ಭೂತಾನಿ' (ತೈ. ೩-೧) ಇತ್ಯಾದಿ ವಾಕ್ಯಂ ನಿಖಿಲಜಗದೇಕಕಾರಣಂ ಬ್ರಹ್ಮೈವ[2] ಬೋಧಯತ್ಯೇವೇತಿ ಸಿದ್ಧಮ್ ।

(ಅರ್ಥ)

**೩. ಶಾಸ್ತ್ರಪ್ರಮಾಣಕವಾಗಿರುವದರಿಂದ.**

ಹೀಗೆ ಚಿದಚಿದ್ವಸ್ತುಗಳನ್ನು ತನ್ನ ಶರೀರವಾಗಿ ಉಳ್ಳದ್ದಾದ್ದರಿಂದ ಆ (ಚಿದಚಿತ್ತುಗಳಿಂದ) ಕೂಡಿಕೊಂಡಿರುವ ಬ್ರಹ್ಮವೇ ಜಗತ್ತಿಗೆ ಉಪಾದಾನವೂ ನಿಮಿತ್ತವೂ ಆಗಿದೆ ಎಂಬುದು ಅನುಮಾನಗಮ್ಯವಲ್ಲ, ಏಕೆಂದರೆ ಅದಕ್ಕೆ ಶಾಸ್ತ್ರವೊಂದೇ ಪ್ರಮಾಣವು. ಆದ್ದರಿಂದ 'ಯಾವದರಿಂದ ಈ ಭೂತಗಳು (ಹುಟ್ಟುತ್ತವೆಯೋ)' (ತೈ. ೩-೧) ಎಂಬುವೇ ಮುಂತಾದ ವಾಕ್ಯವು ಸಮಸ್ತಜಗತ್ತಿಗೂ

---

1. ಈ ಶಬ್ದಕ್ಕೆ ಮುಂದೆ 'ತಸ್ಯ' ಆದ ಮೇಲೆ ಅನ್ವಯ.

2. 'ಬ್ರಹ್ಮ' ಎಂದಿಷ್ಟೇ ತೆ॥ ಪಾಠ; 'ಬ್ರಹ್ಮೈವ ಬೋಧಯತ್ಯೇವ' ಎಂಬುವಕ್ಕೆ 'ಬ್ರಹ್ಮ ಅವಗಮಯತ್ಯೇವ' ಎಂದೂ ಪಾಠವುಂಟು.

ತಾನೊಂದೇ ಕಾರಣವಾಗಿರುವ ಬ್ರಹ್ಮವನ್ನೇ ತಿಳಿಸಿಯೇಕೊಡುತ್ತದೆ ಎಂದು ಸಿದ್ಧವಾಯಿತು.

## ಸಮನ್ವಯಾಧಿಕರಣ

### ೪. ತತ್ತು ಸಮನ್ವಯಾತ್ (೧ ೧ ೪)

(ಮೂಲ)

೧೩. ಪುರುಷಾರ್ಥತಯಾ ಅನ್ವಯಃ[1] ಸಮನ್ವಯಃ ಶಾಸ್ತ್ರಾಖ್ಯ ಪ್ರಮಾಣಸ್ಯ ಪುರುಷಾರ್ಥಪರ್ಯವಸಾಯಿತ್ವೇಽಪಿ ಬ್ರಹ್ಮ ಸ್ವಸ್ಯ ಪರಸ್ಯ ಚಾನುಭವಿತುಃ ಅವಿಶೇಷೇಣ[2] ಸ್ವರೂಪೇಣ ಗುಣೈಃ ವಿಭೂತ್ಯಾ ಚ[3] ಅನುಭೂಯಮಾನಮ್ ಅನವಧಿಕಾತಿಶಯಾನನ್ದರೂಪಮಿತಿ ಪುರುಷಾರ್ಥತ್ವೇನಾಭಿಧೇಯತಯಾ ಅನ್ವಯಾತ್ ಬ್ರಹ್ಮಣಃ ಶಾಸ್ತ್ರಪ್ರಮಾಣಕತ್ವಮುಪಪನ್ನತರಮಿತಿ ನಿರವದ್ಯಂ ನಿಖಿಲಜಗದೇಕಕಾರಣಂ ಬ್ರಹ್ಮ ವೇದಾನ್ತಾಃ ಪ್ರತಿಪಾದಯನ್ತೀತ್ಯುಕ್ತಮ್ । ತಸ್ಯೈಕಸ್ಯ ಏಕದೈವ ಕೃತ್ಸ್ನಜಗನ್ನಿಮಿತ್ತತ್ವಂ ತಸ್ಯೈವ ಉಪಾದಾನತಯಾ ಜಗದಾತ್ಮಕತ್ವಂ ಚ ನಾನುಮಾನಾದಿಗಮ್ಯಮಿತಿ ಶಾಸ್ತ್ರೈಕಪ್ರಮಾಣತ್ವಾತ್ ತಸ್ಯ ಚ ಅನವಧಿಕಾತಿಶಯಾನನ್ದರೂಪತಯಾ ಪರಮಪುರುಷಾರ್ಥತ್ವಾತ್ ವೇದಾನ್ತಾಃ ಪ್ರತಿಪಾದಯನ್ತ್ಯೇವೇತಿ ಸ್ಥಿರೀಕೃತಮ್ ॥

(ಅರ್ಥ)

ಪುರುಷಾರ್ಥರೂಪದಿಂದ ಅನ್ವಯವಾಗುವದೇ **ಸಮನ್ವಯವು**. ಶಾಸ್ತ್ರವೆಂಬ ಪ್ರಮಾಣವು ಪುರುಷಾರ್ಥದಲ್ಲಿಯೇ ಕೊನೆಗಾಣುವದಾದರೂ ಬ್ರಹ್ಮವು ತನಗೂ ಅನುಭವಿಸುವ ಮತ್ತೊಬ್ಬನಿಗೂ ಒಂದೇ ಸ್ವರೂಪದಿಂದಲೂ ಗುಣಗಳಿಂದಲೂ ವಿಭೂತಿಯಿಂದಲೂ ಒಡಗೂಡಿ ಅನುಭವಕ್ಕೆ ಬರುತ್ತಿರುವದಾಗಿ, ಇನ್ನಿಲ್ಲವೆಂಬ ಮಿಗಿಲಿಲ್ಲದ ಆನಂದದ ರೂಪವಾಗಿಯೇ ಇದೆಯಾಗಿ ಬ್ರಹ್ಮವು ಪುರುಷಾರ್ಥರೂಪದಿಂದ ಅಭಿಧೇಯವಾಗಿ ಅನ್ವಯವಾಗಿರುವದರಿಂದ ಶಾಸ್ತ್ರವು ಅದಕ್ಕೆ ಪ್ರಮಾಣವೆಂಬುದು ಇನ್ನೂ ಹೆಚ್ಚು ಯುಕ್ತವಾಗಿದೆ. ಅದಕಾರಣ ಯಾವ ದೋಷವೂ ಇಲ್ಲದ ಅಖಿಲಜಗತ್ತಿಗೂ ತಾನೊಂದೇ ಕಾರಣವಾಗಿರುವ ಬ್ರಹ್ಮವನ್ನು ವೇದಾಂತಗಳು ಪ್ರತಿಪಾದಿಸುತ್ತವೆ ಎಂದು (ಹಿಂದೆ) ಹೇಳಿದ್ದಾಯಿತು; ಏಕೆಂದರೆ ಆತನೊಬ್ಬನೇ ಒಮ್ಮೆಗೇ ಜಗತ್ತಿಗೆಲ್ಲ ನಿಮಿತ್ತ(ಕಾರಣ)ನೆಂಬುದೂ ಅವನೇ ಉಪಾದಾನ

---

1. 'ಸಮ್ಯಗನ್ವಯಃ' ಎಂದು ಪಾ॥
2. ಈ ಮಾತು ಕೆಲವು ಪಾಠಗಳಲ್ಲಿಲ್ಲ.
3. 'ವಿಭೂತ್ಯಾ ವಾ' ಎಂಬ ಪಾಠಕ್ಕಿಂತ ಇದು ಮೇಲು.

ಕಾರಣವಾಗಿ ಜಗದಾತ್ಮಕನೂ ಆಗಿರುತ್ತಾನೆಂಬುದೂ ಅನುಮಾನಾದಿ(ಪ್ರಮಾಣಾದಿಗಳಿಂದ) ತಿಳಿದುಕೊಳ್ಳುವವಕ್ಕೆ ಬರುವಂತಿಲ್ಲವಾದ್ದರಿಂದ ಕೇವಲಶಾಸ್ತ್ರದಿಂದಲೇ ತಿಳಿದುಕೊಳ್ಳತಕ್ಕದ್ದಾಗಿರುತ್ತದೆ. **ಆ (ಬ್ರಹ್ಮವು) ಇನ್ನಿಲ್ಲವೆಂಬಷ್ಟು ಅತಿಶಯವಾದ ಆನಂದರೂಪವಾಗಿರುವದರಿಂದ ಪರಮಪುರುಷಾರ್ಥವಾಗಿರುವದರಿಂದ ವೇದಾಂತಗಳು (ಅದನ್ನೇ) ಪ್ರತಿಪಾದಿಸುತ್ತವೆ ಎಂಬುದನ್ನು (ಈ ಸೂತ್ರದಲ್ಲಿ) ಗಟ್ಟಿಗೊಳಿಸಿದ್ದಾಯಿತು.**[1]

(ಮೂಲ)

೧೪. ಅತಃ ಪರಂ ಪಾದಶೇಷೇಣ ಜಗತ್ಕಾರಣತಯಾ ಪ್ರಧಾನಪುರುಷ ಪ್ರತಿಪಾದನಾರ್ಹತಯಾ ಸರ್ವಜ್ಞಂ ಸತ್ಯಸಂಕಲ್ಪಂ ನಿರಸ್ತಾವಿದ್ಯಾದಿಸಮಸ್ತದೋಷಗನ್ಧಮ್ ಅಪರಿಮಿತೋದಾರಗುಣಸಾಗರಂ ಬ್ರಹ್ಮೈವ ವೇದಾನ್ತಾಃ ಪ್ರತಿಪಾದಯನ್ತೀತ್ಯುಚ್ಯತೇ ॥ ೪ ॥

(ಅರ್ಥ)

ಇನ್ನು ಮುಂದಕ್ಕೆ ಈ ಪಾದದ ಉಳಿದ (ಭಾಗ)ದಲ್ಲಿ ಪ್ರಧಾನವನ್ನಾಗಲಿ ಪುರುಷನನ್ನಾಗಲಿ ಜಗತ್ಕಾರಣವೆಂದು ಪ್ರತಿಪಾದಿಸುವಂತಿಲ್ಲವಾದ್ದರಿಂದ ಸರ್ವಜ್ಞವೂ ಸತ್ಯಸಂಕಲ್ಪವೂ ಅವಿದ್ಯೆಯೇ ಮುಂತಾದ ಯಾವ ದೋಷಗಳ ವಾಸನೆಯೂ ಇಲ್ಲದ್ದು ಅಪರಿಮಿತವಾದ ಉದಾರಗುಣಗಳಿಗೆ ಸಾಗರವೂ ಆಗಿರುವ ಬ್ರಹ್ಮವನ್ನೇ ವೇದಾಂತಗಳು ಪ್ರತಿಪಾದಿಸುತ್ತವೆ ಎಂದು ಹೇಳಲಾಗುವದು. ॥ ೪ ॥

## ಈಕ್ಷತ್ಯಧಿಕರಣ

### ೫. ಈಕ್ಷತೇರ್ನಾಶಬ್ದಮ್ (೧-೧-೫)

(ಮೂಲ)

೧೫. ತತ್ರ ತಾವದ್ ಪ್ರಧಾನಂ ವೇದಾನ್ತಪ್ರತಿಪಾದನಾನರ್ಹಮಿತ್ಯಾಹ। ಅಶಬ್ದಮ್ ಆನುಮಾನಿಕಂ ಪ್ರಧಾನಮ್ । ತತ್ ವೇದಾನ್ತವೇದ್ಯಮ್ ನ[2] । ಕುತಃ ? ಈಕ್ಷತೇಃ। 'ಸದೇವ ಸೋಮ್ಯೇದಮಗ್ರ ಆಸೀದೇಕಮೇವಾದ್ವಿತೀಯಮ್' (ಛಾಂ. ೬-೨-೧) ಇತಿ ಪ್ರಸ್ತುತಜಗತ್ಕಾರಣವ್ಯಾಪಾರವಾಚಿನಃ ಈಕ್ಷತೇರ್ಧಾತೋಃ ಶ್ರವಣಾತ್ 'ತದೈಕ್ಷತ ಬಹು ಸ್ಯಾಮ್' (ಛಾಂ. ೬-೨-೩) ಇತಿ ॥ ೫ ॥

1. ಹಿಂದಿನ ಸೂತ್ರದಲ್ಲಿ ಇಡಿಯ ಜಗತ್ತಿಗೆ ಬ್ರಹ್ಮವೊಂದೇ ನಿಮಿತ್ತಕಾರಣವೂ ಆಗಿದೆ, ಉಪಾದಾನಕಾರಣವೂ ಆಗಿದೆ -ಎಂಬಿದನ್ನು ಅನುಮಾನಾದಿಗಳಿಂದ ಸಾಧಿಸುವದು ಆಗಲಾರದಾದ್ದರಿಂದ ಶಾಸ್ತ್ರವೇ ಅದನ್ನು ಪ್ರತಿಪಾದಿಸುತ್ತದೆ ಎಂದು ಹೇಳಿತ್ತು. ಈಗ ಬ್ರಹ್ಮವು ಆನಂದರೂಪದಿಂದ ಪರಮಪುರುಷಾರ್ಥವಾಗಿರುವದರಿಂದ ಶಾಸ್ತ್ರವು ಅದನ್ನೇ ಪ್ರತಿಪಾದಿಸುತ್ತದೆ ಎಂದು ಹೇಳಿದೆ ಎಂದು ಅಭಿಪ್ರಾಯ.

2. 'ನ ತತ್ ವೇದಾನ್ತವೇದ್ಯಮ್' ಎಂದು ತ॥

(ಅರ್ಥ)

**೫. ಅಶಬ್ದವು (ವೇದಾಂತಗಮ್ಯ)ವಲ್ಲ. ಏಕೆಂದರೆ ಈಕ್ಷತಿ (ಶ್ರವಣ)ವಿದೆ.**

ಇಲ್ಲಿ ಮೊದಲು ಪ್ರಧಾನವು ವೇದಾಂತಗಳು ಪ್ರತಿಪಾದಿಸುವದಕ್ಕೆ ತಕ್ಕದ್ದಲ್ಲ ಎಂದು ತಿಳಿಸುತ್ತಾರೆ. ಅಶಬ್ದವು ಎಂದರೆ ಅನುಮಾನದಿಂದ ಸಿದ್ಧಪಡಿಸಬೇಕಾಗಿರುವ **ಪ್ರಧಾನವು.** ಅದು ವೇದಾಂತಗಳಿಂದ ತಿಳಿಯಬರತಕ್ಕದ್ದಲ್ಲ. ಏಕೆಂದರೆ. ಈಕ್ಷತಿ(ಶ್ರವಣ)ವಿದೆ. 'ಅಪ್ಪ, ಇದು[1] ಮೊದಲು ತಾನೊಂದೇ ಎರಡನೆಯದಿಲ್ಲದೆ ಇರುವ ಸತ್ತೇ ಆಗಿತ್ತು' (ಛಾಂ. ೬-೨-೧) ಎಂದು ಪ್ರಕೃತವಾಗಿರುವ[2] ಜಗತ್ಕಾರಣದ ವ್ಯಾಪಾರವನ್ನು ಹೇಳುವ ಈಕ್ಷತಿ (ಯೋಚಿಸಿ ನೋಡು ಎಂಬ) ಧಾತುವಿನ ಶ್ರವಣವು 'ಅದು ಬಹುವಾಗುವೆನು ಎಂದು ಯೋಚಿಸಿನೋಡಿತು' (ಛಾಂ. ೬-೨-೩) ಎಂಬ (ಶ್ರುತಿಯಲ್ಲಿ) ಇದೆ. ॥ ೫ ॥

## ೬. ಗೌಣಶ್ಚೇನ್ನಾಽಽತ್ಮಶಬ್ದಾತ್ (೧-೧-೬)

(ಮೂಲ)

೧೬. 'ತತ್ತೇಜ ಐಕ್ಷತ' (ಛಾಂ. ೬-೨-೩) ಇತ್ಯಾದಿಷು ಅಚೇತನೇಽಪಿ ವಸ್ತುನಿ ಈಕ್ಷತಿಃ ಶ್ರೂಯತೇ। ತತ್ರ ಗೌಣಃ। ಏವಮುತ್ರಾಪಿ ಪ್ರಧಾನ ಏವ ಈಕ್ಷತಿ ಗೌಣಃ[3] ಇತಿ ಚೇತ್, ನೈತದುಪಪದ್ಯತೇ। ಪ್ರಸ್ತುತೇ ಸಚ್ಛಬ್ದವಾಚ್ಯೇ ಶ್ರೂಯಮಾಣಾಚ್ಚೇತನವಾಚಿನ ಆತ್ಮಶಬ್ದಾತ್। 'ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ' (ಛಾಂ. ೬-೮-೭) ಇತಿ ಹಿ ಉತ್ತರತ್ರ ಶ್ರೂಯತೇ ॥

(ಅರ್ಥ)

**೬. ಗೌಣವು ಎಂದರೆ, ಅಲ್ಲ. ಏಕೆಂದರೆ ಆತ್ಮಶಬ್ದವಿದೆ.**

'ಆ ತೇಜಸ್ಸು ಯೋಚಿಸಿ ನೋಡಿತು' (ಛಾಂ. ೬-೨-೩) ಎಂಬಿವೇ ಮುಂತಾದವುಗಳಲ್ಲಿ[4] ಅಚೇತನವಾದ ವಸ್ತುವಿನಲ್ಲಿಯೂ ಈಕ್ಷತಿ (ಯೋಚಿಸಿ ನೋಡು ಎಂಬ ಧರ್ಮವು) ಶ್ರುತಿಯಲ್ಲಿ (ಪ್ರಯುಕ್ತವಾಗಿ) ಇದೆ. ಅಲ್ಲಿ (ಅದು)

---

1. ಈ ಕಾರ್ಯರೂಪವಾದದ್ದು.

2. ಇಲ್ಲಿ ಛಾಂದೋಗ್ಯಶ್ರುತಿಯಲ್ಲಿರುವ ಸಚ್ಛಬ್ದವಾಚ್ಯವಾದ ಜಗತ್ಕಾರಣವೇ ಪ್ರಕೃತವಾಗಿದೆ.

3. ಇದು ತೆ॥ ಪಾಠ. 'ತತ್ರ ಗೌಣಃ ಇತಿ ಚೇತ್' ಎಂಬ ಪಾಠಕ್ಕಿಂತ ಇದೇ ಮೇಲು.

4. ತೇಜಸ್ಸು, ಅಪ್ಪು- ಇವುಗಳಲ್ಲಿ ಎಂದರ್ಥ. ಇಲ್ಲಿ ಎರಡೇ ಇದ್ದರೂ ಬಹುವಚನವನ್ನು ಏಕೆ ಪ್ರಯೋಗಿಸಿದೆ ? ಎಂಬುದು ತಿಳಿಯಲಿಲ್ಲ.

ಗೌಣವೇ.[1] ಹಾಗೆಯೇ ಇಲ್ಲಿಯೂ ಈಕ್ಷತಿ (ನೋಡುಧಾತುವು) ಪ್ರಧಾನದಲ್ಲಿಯೇ ಗೌಣವಾಗಿ (ಪ್ರಯುಕ್ತವಾಗಿ)ದೆ[2] ಎಂದರೆ, ಇದು ಹೊಂದುವದಿಲ್ಲ. ಏಕೆಂದರೆ ಪ್ರಕೃತವಾಗಿರುವ ಸಚ್ಛಬ್ದವಾಚ್ಯ(ವಾದ ಜಗತ್ಕಾರಣದಲ್ಲಿ) ಚೇತನವಾಚಕವಾದ ಆತ್ಮಶಬ್ದವಿದೆ.[3] 'ಅದು ಆತ್ಮನು ; ಶ್ವೇತಕೇತುವೆ, ಅದೇ ನೀನು' (ಛಾಂ. ೬-೮-೭) ಎಂದಲ್ಲವೆ, ಮುಂದೆ ಶ್ರುತಿಯಲ್ಲಿದೆ ?

(ಮೂಲ)

೧೭. ತೇಜಃಪ್ರಭೃತಿಷ್ವಪಿ ನ ಗೌಣಮೀಕ್ಷಣಮ್ । ತೇಜಃಪ್ರಭೃತಿಶಬ್ದೈರಪಿ ತತ್ತಚ್ಛರೀರಕಂ ಬ್ರಹ್ಮೈವಾಭಿಧೀಯತೇ । 'ಅನೇನ ಜೀವೇನಾಽತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' (ಛಾಂ. ೬-೩-೨) ಇತಿ ಬ್ರಹ್ಮಾತ್ಮಕಜೀವಾನುಪ್ರವೇಶಾದೇವ ಸರ್ವಸ್ಯ ವಸ್ತುನೋ ನಾಮರೂಪಭಾಕ್ತ್ವಾತ್ । 'ತತ್ಸೃಷ್ಟ್ವಾ । ತದೇವಾನುಪ್ರಾವಿಶತ್ । ತದನುಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ ।" (ತೈ. ೨-೬) ಇತಿ ಚೇತನಮ್ ಅಚೇತನಂ ಚ ಪೃಥಕ್ ನಿರ್ದಿಶ್ಯ ತದುಭಯಮನುಪ್ರವಿಶ್ಯ ಸತ್ತ್ಯಚ್ಛಬ್ದವಾಚ್ಯೋಽಭವತ್[4] ಇತಿ ಹಿ ಸಮಾನಪ್ರಕರಣೇ ಸ್ಪಷ್ಟಮಭಿಹಿತಮ್ ॥ ೬ ॥

(ಅರ್ಥ)

ತೇಜಸ್ಸೇ ಮುಂತಾದವುಗಳಲ್ಲಿಯೂ ಈಕ್ಷಣವು (ನೋಟವು) ಗೌಣವಲ್ಲ.[5] (ಏಕೆಂದರೆ) **ತೇಜಸ್ಸೇ ಮುಂತಾದ ಶಬ್ದಗಳಿಂದಲೂ ಆಯಾ (ತೇಜಸ್ಸೇ ಮುಂತಾದ) ಶರೀರವುಳ್ಳ ಬ್ರಹ್ಮವನ್ನೇ ಹೇಳಿರುತ್ತದೆ.**[6] 'ಈ ಜೀವನೆಂಬ ಆತ್ಮನಿಂದ ಒಳಹೊಕ್ಕು ನಾಮರೂಪಗಳನ್ನು ಬಿಡಿಸುವೆನು' (ಛಾಂ. ೬-೩-೨)-ಎಂದು ಬ್ರಹ್ಮವನ್ನು ಆತ್ಮನಾಗಿ ಉಳ್ಳ[7] ಜೀವನು ಒಳಹೊಕ್ಕಿದ್ದರಿಂದ ಸಮಸ್ತ

---

1. ಏಕೆಂದರೆ ತೇಜಸ್ಸೇ ಮುಂತಾದವು ಅಚೇತನ ; ಅವುಗಳು ಯೋಚಿಸಿ ನೋಡಲಾರವು.

2. ಪ್ರಧಾನವು ಯೋಚಿಸಿನೋಡಿತೋ ಎಂಬಂತೆ ಕ್ರಮವಾಗಿ ಸೃಷ್ಟಿಯನ್ನು ಮಾಡಿದೆ ಎಂದು ಗೌಣವಾಗಿ 'ನೋಡಿತು' ಎಂಬ ಶಬ್ದವನ್ನು ಪ್ರಯೋಗಿಸಿದೆ ಎಂದು ಅಭಿಪ್ರಾಯ.

3. ಪ್ರಧಾನವು ಅಚೇತನವಾದ್ದರಿಂದ ಯಾರಿಗೂ ಆತ್ಮನಾಗಲಾರದು ; ಇಲ್ಲಿ ಜಗತ್ಕಾರಣವನ್ನು ಚೇತನನೆಂದು ಸೂಚಿಸುವದಕ್ಕೆ ಆತ್ಮನೆಂದಿರುವದರಿಂದ ಅದು ಪ್ರಧಾನವಲ್ಲ.

4. 'ತತ್ತದಭವತ್ ತತ್ತಚ್ಛಬ್ದವಾಚ್ಯೋಽಭವತ್' ಎಂದು ಪಾಠಾಂತರ.

5. ಹಿಂದೆ ವಾದಕ್ಕಾಗಿ ಗೌಣಪ್ರಯೋಗವೆಂದು ಒಪ್ಪಲಾಗಿತ್ತು : ಈಗ ಆ ಒಪ್ಪಿಗೆಯನ್ನು ಬಿಟ್ಟು ಅಲ್ಲಿಯೂ ಮುಖ್ಯಾರ್ಥದಲ್ಲಿಯೇ ಈಕ್ಷತಿಧಾತು ಪ್ರಯುಕ್ತವಾಗಿದೆ ಎಂದು ತಿಳಿಸುತ್ತಾರೆ.

6. ಸರ್ವಶಬ್ದಗಳಿಗೂ ಆಯಾ ಶರೀರವುಳ್ಳ ಬ್ರಹ್ಮವೇ ವಾಚ್ಯವು ಎಂದು ಅಭಿಪ್ರಾಯ.

7. ಜೀವನು ಒಳಹೊಗುವದೆಂದರೆ ಬ್ರಹ್ಮದೊಡನೆಯೇ ; ಏಕೆಂದರೆ ಬ್ರಹ್ಮವೇ ಅವನಿಗೆ ಆತ್ಮ.

ವಸ್ತುಗಳಿಗೂ ನಾಮರೂಪಗಳುಂಟಾಗಿರುತ್ತವೆ.[1] 'ಅದನ್ನು ಸೃಷ್ಟಿಸಿ ಅದನ್ನೇ ಒಳಹೊಕ್ಕಿತು, ಅದನ್ನು ಒಳಹೊಕ್ಕು ಸತ್ತೂ ತ್ಯತ್ತೂ ಆಯಿತು. ನಿರುಕ್ತವೂ ಅನಿರುಕ್ತವೂ ನಿಲಯನವೂ ಅನಿಲಯನವೂ ವಿಜ್ಞಾನವೂ ಅವಿಜ್ಞಾನವೂ, ಸತ್ಯವೂ ಅನೃತವೂ ಸತ್ಯವೇ ಆಯಿತು' (ತೈ. ೨-೬) ಎಂದು (ಇದಕ್ಕೆ) ಸಮಾನವಾಗಿ (ಸೃಷ್ಟಿ)ಪ್ರಕರಣ[2]ದಲ್ಲಿ ಚೇತನವನ್ನೂ ಅಚೇತನವನ್ನೂ ಬೇರೆಬೇರೆಯಾಗಿ ಹೇಳಿ[3] ಅವೆರಡನ್ನೂ ಒಳಹೊಕ್ಕು (ಬ್ರಹ್ಮವು) ಸತ್ಯ, ತ್ಯತ್- ಎಂಬ ಶಬ್ದ (ಗಳಿಗೆ[4] ವಾಚ್ಯ)ವಾಯಿತು ಎಂದಲ್ಲವೆ, ಸ್ಪಷ್ಟವಾಗಿ ಹೇಳಿರುತ್ತದೆ ? ॥ ೬ ॥

## ೭. ತನ್ನಿಷ್ಠಸ್ಯ ಮೋಕ್ಷೋಪದೇಶಾತ್ (೧-೧-೭)

(ಮೂಲ)

೧೭. ಇತಶ್ಚ ಪ್ರಧಾನಾದರ್ಥಾನ್ತರಭೂತಂ ಸಚ್ಛಬ್ದಾಭಿಹಿತಂ ಜಗತ್ಕಾರಣಮ್ । ಸಚ್ಛಬ್ದಾಭಿಹಿತತತ್ತ್ವನಿಷ್ಠಸ್ಯ ಮೋಕ್ಷೋಪದೇಶಾತ್ । 'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ' (ಛಾಂ. ೬-೧೪-೨) ಇತಿ ಹಿ ತನ್ನಿಷ್ಠಸ್ಯ ಮೋಕ್ಷ ಉಪದಿಶ್ಯತೇ । ಪ್ರಧಾನಕಾರಣವಾದಿನಾಮಪಿ ಹಿ ಪ್ರಧಾನನಿಷ್ಠಸ್ಯ ಮೋಕ್ಷೋ ನಾಭಿಮತಃ । ೭ ॥

(ಅರ್ಥ)

**೭. ತನ್ನಿಷ್ಠನಿಗೆ ಮೋಕ್ಷವನ್ನು ಉಪದೇಶಿಸಿರುವದರಿಂದಲೂ (ಹೀಗೆ).**

ಈ ಕಾರಣದಿಂದಲೂ ಸಚ್ಛಬ್ದದಿಂದ ಹೇಳಿರುವ ಜಗತ್ಕಾರಣವು ಪ್ರಧಾನಕ್ಕಿಂತ ಬೇರೆಯೇ (ಎಂದು ತಿಳಿಯಬೇಕು.) ಏಕೆಂದರೆ ಸಚ್ಛಬ್ದದಿಂದ ಹೇಳಿರುವ ತತ್ತ್ವದಲ್ಲಿ ನಿಷ್ಠನಾದವನಿಗೆ[5] ಮೋಕ್ಷವನ್ನು ಉಪದೇಶಿಸಿದೆ. ಅವನಿಗೆ ಶರೀರದಿಂದ

---

1. ಈ ಪ್ರವೇಶವಿಲ್ಲದಿದ್ದರೆ ಅವು ಪದಾರ್ಥಗಳೆನಿಸುವದೇ ಇಲ್ಲ.

2. ಪ್ರಕೃತವಾಗಿರುವದು ಛಾಂದೋಗ್ಯಶ್ರುತಿ, ತೈತ್ತಿರೀಯದಲ್ಲಿಯೂ ಹೀಗೆಯೇ ಸೃಷ್ಟಿಯನ್ನು ಹೇಳಿದೆ.

3. ಸತ್ತೆಂದರೆ ನಿರ್ವಿಕಾರನಾಗಿ ಯಾವಾಗಲೂ ಒಂದೇ ರೂಪದಲ್ಲಿರುವ ಚೇತನನು ; ತ್ಯತ್ ಎಂದರೆ ವಿಕಾರಕ್ಕೆ ಆಶ್ರಯವಾಗಿರುವ ಅಚೇತನವು ; ಜಾತಿಗುಣಕ್ರಿಯಾಶಬ್ದವಾಚ್ಯವಾದ ಅಚೇತನವು ನಿರುಕ್ತ, ಜಾತ್ಯಾದಿಗಳಿಲ್ಲದ ಚೇತನವು ಅನಿರುಕ್ತ ; ವಿಜ್ಞಾನವೆಂದರೆ ಚೇತನಸ್ವರೂಪವು, ಅವಿಜ್ಞಾನವೆಂದರೆ ಜಡವು- ಎಂದು ರಂಗರಾಮಾನುಜಭಾಷ್ಯದಲ್ಲಿದೆ.

4. ಪಾಠಾಂತರಕ್ಕೆ ಅದದು ಆಯಿತು, ಆಯಾ ಶಬ್ದಗಳಿಗೆ ವಾಚ್ಯವಾಯಿತು- ಎಂದರ್ಥ. ಬ್ರಹ್ಮವೇ ಸತ್, ತ್ಯತ್- ಮುಂತಾದ ಎಲ್ಲಾ ಚೇತನಾಚೇತನವಾಚಕಶಬ್ದಗಳಿಗೂ ವಾಚ್ಯವು ಎಂದರ್ಥ.

5. ನಿಷ್ಠನೆಂದರೆ ಆ ಸದ್ಬ್ರಹ್ಮವೇ ನನ್ನ ಆತ್ಮನು- ಎಂದು ಉಪಾಸನೆಮಾಡಿದವನು.

ಬಿಡುಗಡೆಯಾಗುವದಲ್ಲ, ಅಲ್ಲಿಯವರೆಗೇ[1] ತಡ, ಆ ಕೂಡಲೆ ಸತ್ತಿನಲ್ಲಿ ಸೇರಿ ಹೋಗುತ್ತಾನೆ' (ಛಾಂ. ೬-೧೪-೨) ಎಂದಲ್ಲವೆ, ಅದರಲ್ಲಿ ನಿಷ್ಠನಾದವನಿಗೆ ಮೋಕ್ಷವನ್ನು ಉಪದೇಶಿಸಿದೆ ? ಪ್ರಧಾನನಿಷ್ಠನಾದವನಿಗೆ ಮೋಕ್ಷವಾಗುವ ದೆಂಬುದು ಪ್ರಧಾನವೇ ಜಗತ್ಕಾರಣವೆನ್ನುವ ವಾದಿಗಳಿಗೂ ಸಮ್ಮತವಲ್ಲವಷ್ಟೆ ?[2]

## ೮. ಹೇಯತ್ವಾವಚನಾಚ್ಚ (೧-೧-೮)

(ಮೂಲ)

೧೮. ಯದಿ ಪ್ರಧಾನಮತ್ರ ವಿವಕ್ಷಿತಮ್, ತದಾ ತಸ್ಯ ಹೇಯತ್ವಾತ್ ಅಧ್ಯೇಯತ್ವಮುಚ್ಯೇತ[3] । ನ ತದುಚ್ಯತೇ । ಮೋಕ್ಷಸಾಧನತಯಾ ಧ್ಯೇಯತ್ವ ಮೇವ[4] ಅತ್ರೋಚ್ಯತೇ 'ತತ್ತ್ವಮಸಿ ಶ್ವೇತಕೇತೋ' (ಛಾಂ. ೬-೮-೭) ಇತ್ಯಾದಿನಾ ॥ ೮ ॥

(ಅರ್ಥ)

### ೮. ಹೇಯತ್ವವನ್ನು ಹೇಳದೆ ಇರುವದರಿಂದಲೂ.

ಇಲ್ಲಿ ಪ್ರಧಾನವೇ (ಜಗತ್ಕಾರಣವೆಂಬ) ಅಭಿಪ್ರಾಯವಿದ್ದಿದ್ದರೆ, ಆಗ ಅದು ಹೇಯ (ಬಿಡತಕ್ಕದ್ದು) ಆದ್ದರಿಂದ (ಅದನ್ನು) ಧ್ಯಾನಮಾಡತಕ್ಕದ್ದಲ್ಲವೆಂದು ಹೇಳಬೇಕಾಗಿತ್ತು.[5] ಆದರೆ ಹಾಗೆಂದು ಹೇಳಿಲ್ಲ, ಮೋಕ್ಷಕ್ಕೆ ಸಾಧನವಾಗಿ ಅದನ್ನು ಧ್ಯಾನಿಸಬೇಕೆಂದೇ ಅಲ್ಲವೆ, ಇಲ್ಲಿ 'ಶ್ವೇತಕೇತುವೆ. ಅದೇ ನೀನು' (ಛಾಂ. ೬-೮-೭) ಎಂದು ಮುಂತಾದ ವಾಕ್ಯದಿಂದ ಹೇಳಿದೆ[6] ? ॥ ೮ ॥

## ೯. [7]ಪ್ರತಿಜ್ಞಾವಿರೋಧಾತ್ (೧-೧-೯)

(ಮೂಲ)

೧೯. ಇತಶ್ಚ ನ ಪ್ರಧಾನಮ್ । ಏಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾ ವಿರೋಧಾತ್ । ಸಚ್ಛಬ್ದವಾಚ್ಯತತ್ತ್ವಜ್ಞಾನೇನ ತತ್ಕಾರ್ಯತಯಾ ಚೇತನಾ

---

1. ಪ್ರಾರಬ್ಧಕರ್ಮದಿಂದ ಇದ್ದುಕೊಂಡಿರುವ ದೇಹವನ್ನು ಬಿಡುವವರೆಗೇ.

2. ಪ್ರಧಾನವನ್ನು ಉಪಾಸನೆಮಾಡಿದರೆ ಮೋಕ್ಷವೆಂದೇನೂ ಸಾಂಖ್ಯರು ಒಪ್ಪಿಲ್ಲ ; ಪ್ರಕೃತಿಪುರುಷವಿವೇಕದಿಂದಲೇ ಮೋಕ್ಷವೆಂದು ಅವರು ಹೇಳುತ್ತಾರೆ.

3. ಹೇಯತ್ವಮಧ್ಯೇಯತ್ವಮುಚ್ಯೇತ ಎಂದು ಪಾ॥

4. ಇದರ ಮುಂದೆ 'ಹಿ' ಎಂದು ಹೆಚ್ಚಾಗಿ ಪಾ॥

5. ಪಾಠಾಂತರಕ್ಕೆ 'ಅದನ್ನು ಬಿಡಬೇಕು, ಧ್ಯಾನಿಸಬಾರದು ಎಂದು ಹೇಳಬೇಕಾಗಿತ್ತು' ಎಂದು ಅನುವಾದ.

6. 'ತತ್ತ್ವಮಸಿ' (ಅದೇ ನೀನಾಗಿರುವೆ) ಎಂಬ ವಾಕ್ಯಕ್ಕೆ ಹಾಗೆಂದು ಧ್ಯಾನಿಸು ಎಂದು ಅರ್ಥ.

7. ಈ ಸೂತ್ರವು ಶಾಂಕರಪಾಠದಲ್ಲಿಲ್ಲ ; ಆದರೆ ಭಾಷ್ಯದಲ್ಲಿ ಈ ಯುಕ್ತಿಯನ್ನೂ ಕೊಟ್ಟಿದೆ.

ಚೇತನಸರ್ವವಸ್ತುಜ್ಞಾನಮ್ 'ಯೇನಾಶ್ರುತಂ ಶ್ರುತಂ ಭವತಿ' (ಛಾಂ. ೬-೧-೨) ಇತ್ಯಾದಿನಾ ಪ್ರತಿಜ್ಞಾತಮ್ । ತದ್ಧಿ ಪ್ರಧಾನಕಾರಣವಾದೇ ವಿರುಧ್ಯತೇ ; ಚೇತನಸ್ಯ ಪ್ರಧಾನಕಾರ್ಯತ್ವಾಭಾವಾತ್ । ಪ್ರಧಾನಾಪರ್ಥಾನ್ತರಭೂತಬ್ರಹ್ಮ ಕಾರಣವಾದೇ ಚಿದಚಿದ್ವಸ್ತುಶರೀರಂ ಬ್ರಹ್ಮೈವ ನಾಮರೂಪವಿಭಾಗಾವಿಭಾಗಾಭ್ಯಾಂ[1] ಕಾರ್ಯಂ ಕಾರಣಂ ಚೇತಿ ಬ್ರಹ್ಮಜ್ಞಾನೇನ ಕೃತ್ಸ್ನಸ್ಯ ಜ್ಞಾತತಾ ಉಪಪದ್ಯತೇ ॥ ೯ ॥

(ಅರ್ಥ)

### ೯. ಪ್ರತಿಜ್ಞೆಗೆ ವಿರೋಧವಾಗುವದರಿಂದ.

ಈ ಕಾರಣದಿಂದಲೂ (ಸಚ್ಛಬ್ದವಾಚ್ಯವಾದ ಜಗತ್ಕಾರಣವು) ಪ್ರಧಾನ ವಲ್ಲ. ಏಕೆಂದರೆ ಒಂದನ್ನು ಅರಿತರೆ ಎಲ್ಲವನ್ನೂ ಅರಿತಂತೆ ಆಗುವದೆಂಬ ಪ್ರತಿಜ್ಞೆಗೆ (ಪ್ರಧಾನವು ಜಗತ್ಕಾರಣವಾದರೆ) ವಿರೋಧವಾಗುತ್ತದೆ. ಸಚ್ಛಬ್ದವಾಚ್ಯ ವಾದ ತತ್ತ್ವವನ್ನು ಅರಿತುಕೊಳ್ಳುವದರಿಂದ (ಎಲ್ಲವೂ) ಅದರ ಕಾರ್ಯವಾಗಿರು ವದರಿಂದ ಚೇತನಾಚೇತನ(ರೂಪ)ವಾದ ಸರ್ವವಸ್ತುಗಳ ಜ್ಞಾನವಾಗುವದೆಂದು 'ಯಾವದನ್ನು (ಕೇಳಿ ತಿಳಿದದ್ದರಿಂದ) ಕೇಳದೆ ಇದ್ದದ್ದನ್ನು ಕೇಳಿದಂತೆ ಆಗುವದೋ ......' (ಛಾಂ. ೬-೧-೨) ಎಂದು ಮುಂತಾದ ವಾಕ್ಯದಿಂದ ಪ್ರತಿಜ್ಞೆ ಮಾಡಿರುತ್ತದೆ.[2] ಅದು ಪ್ರಧಾನವೇ ಜಗತ್ಕಾರಣವೆಂಬ ವಾದದಲ್ಲಿ ವಿರುದ್ಧವಾಗುತ್ತದೆ ; ಏಕೆಂದರೆ ಚೇತನವಾದದ್ದು ಪ್ರಧಾನದ ಕಾರ್ಯವಲ್ಲ.[3] ಪ್ರಧಾನಕ್ಕಿಂತ ಬೇರೆಯಾದ **ಬ್ರಹ್ಮವೇ ಜಗತ್ಕಾರಣವೆಂಬ ವಾದದಲ್ಲಿ ಚಿದಚಿದ್ವಸ್ತುಗಳನ್ನು ಶರೀರವಾಗಿ ಉಳ್ಳ ಬ್ರಹ್ಮವೇ ನಾಮರೂಪಗಳ ವಿಭಾಗ, ಅವಿಭಾಗ- ಇವುಗಳಿಂದ ಕಾರ್ಯವೂ ಕಾರಣವೂ ಆಗಿದೆಯಾಗಿ,[4] ಬ್ರಹ್ಮಜ್ಞಾನದಿಂದ ಎಲ್ಲವನ್ನೂ ಅರಿಯಬಹುದೆಂಬುದು ಹೊಂದುತ್ತದೆ. ॥ ೯ ॥**

---

1. ಭಾವಾಭಾವಾಭ್ಯಾಮ್ ಎಂದು ಪಾ॥

2. ಶ್ವೇತಕೇತುವನ್ನು ಅವನ ತಂದೆಯು ಯಾವದನ್ನು ಅರಿತರೆ ಎಲ್ಲವನ್ನೂ ಶ್ರವಣ ಮನನನಿದಿಧ್ಯಾಸನಮಾಡಿದಂತೆ ಆಗುವದೋ ಆ ಆದೇಶವನ್ನು ಕುರಿತು ನಿಮ್ಮ ಗುರುಗಳನ್ನು ಕೇಳಿರುವೆಯೊ ?' ಎಂದು ಕೇಳಿರುತ್ತಾನೆ.

3. ಮಹತ್ತು, ಅಹಂಕಾರ- ಮುಂತಾದ ಜಡವಸ್ತುಗಳು ಮಾತ್ರ ಅದರ ಕಾರ್ಯ.

4. ನಾಮರೂಪಗಳ ವಿಭಾಗವಿಲ್ಲದ ಅವಸ್ಥೆಯಲ್ಲಿರುವ ಸೂಕ್ಷ್ಮಚಿದಚಿದ್ವಿಶಿಷ್ಟಬ್ರಹ್ಮವು ಕಾರಣ ; ವಿಭಾಗವಾದಾಗ ಸ್ಥೂಲವಾದ ಚಿದಚಿದ್ವಿಶಿಷ್ಟಬ್ರಹ್ಮವು ಕಾರ್ಯ.

## ೧೦. ಸ್ವಾಪ್ಯಯಾತ್ (೧-೧-೧೦)

(ಮೂಲ)

೨೦. ಇತಶ್ಚ ನ ಪ್ರಧಾನಮ್। 'ಸ್ವಪ್ನಾನ್ತಂ ಮೇ ಸೋಮ್ಯ ವಿಜಾನೀಹೀತಿ ಯತ್ರೈತತ್ಪುರುಷಃ ಸ್ವಪಿತಿ ನಾಮ ಸತಾ ಸೋಮ್ಯ ತದಾ ಸಂಪನ್ನೋ ಭವತಿ। ಸ್ವಮಪೀತೋ ಭವತಿ। ತಸ್ಮಾದೇನಂ ಸ್ವಪಿತೀತ್ಯಾಚಕ್ಷತೇ। ಸ್ವಂ ಹ್ಯಪೀತೋ ಭವತಿ।' (ಛಾಂ. ೬-೮-೧) ಇತಿ ಜೀವಸ್ಯ ಚೇತನಸ್ಯ ಸುಷುಪ್ತಸ್ಯ ಸತಾ ಸಂಪನ್ನಸ್ಯ ಸ್ವಾಪ್ಯಯವಚನಾತ್ ಪ್ರಧಾನಾದರ್ಥಾನ್ತರಭೂತಂ ಸಚ್ಛಬ್ದವಾಚ್ಯಮಿತಿ ವಿಜ್ಞಾಯತೇ ॥೧೦॥

(ಅರ್ಥ)

### ೧೦. ಸ್ವಾಪ್ಯಯವನ್ನು (ಹೇಳಿರು)ವದರಿಂದ.

ಈ ಕಾರಣದಿಂದಲೂ (ಈ ಜಗತ್ಕಾರಣವು) ಪ್ರಧಾನವಲ್ಲ, 'ಅಪ್ಪ, ತನಿನಿದ್ರೆಯನ್ನು (ವಿವರಿಸುತ್ತೇನೆ) ನನ್ನಿಂದ (ಕೇಳಿ) ತಿಳಿದುಕೊ. ಎಲ್ಲಿ ಈ ಪುರುಷನು 'ಸ್ವಪಿತಿ' (ನಿದ್ರಿಸುತ್ತಾನೆ) ಎನಿಸುವನೋ ಎಲೈ ಸೋಮ್ಯನೆ, ಆಗ ಸತ್ತಿನೊಡನೆ ಸೇರಿಕೊಂಡವನಾಗುತ್ತಾನೆ. ತನ್ನಲ್ಲಿ (ಸ್ವಂ) ಲಯವಾದವ(ಅಪೀತಃ)ನಾಗುತ್ತಾನೆ; ಆದ್ದರಿಂದ ಇವನನ್ನು ಸ್ವಪಿತಿ (ನಿದ್ರಿಸುತ್ತಾನೆ) ಎನ್ನುತ್ತಾರೆ.' (ಛಾಂ. ೬-೮-೧) ಎಂದು ಚೇತನನಾದ ಜೀವನು ಸುಷುಪ್ತನಾಗಲು ಸತ್ತಿನೊಡನೆ ಸೇರಿಕೊಂಡಾಗ ಸ್ವಾಪ್ಯಯ (ತನ್ನಲ್ಲಿ ಲಯ)ವನ್ನು ಹೇಳಿರುವದರಿಂದ (ಇಲ್ಲಿ) ಸಚ್ಛಬ್ದವಾಚ್ಯವಾಗಿರುವದು ಪ್ರಧಾನಕ್ಕಿಂತ ಬೇರೆಯಾದ ಪದಾರ್ಥವು ಎಂದು ಗೊತ್ತಾಗುತ್ತದೆ.

(ಮೂಲ)

೨೧. ಸ್ವಮ್ ಅಪೀತೋ ಭವತಿ ಆತ್ಮಾನಮೇವ ಜೀವೋಽಪೀತೋ ಭವತಿ ಇತ್ಯರ್ಥಃ। ಚಿದ್ವಸ್ತುಶರೀರಕಂ[1] ತದಾತ್ಮಭೂತಂ ಬ್ರಹ್ಮೈವ ಜೀವಶಬ್ದೇನ ಅಭಿಧೀಯತ ಇತಿ ನಾಮರೂಪವ್ಯಾಕರಣಶ್ರುತ್ಯಾ ಉಕ್ತಮ್[2]। ತಜ್ಜೀವಶಬ್ದಾಭಿಧೇಯಂ ಪರಂ ಬ್ರಹ್ಮೈವ ಸುಷುಪ್ತಿಕಾಲೇಽಪಿ ಪ್ರಲಯಕಾಲ ಇವ ನಾಮರೂಪಪರಿಷ್ವಙ್ಗಾಭಾವಾತ್ ಕೇವಲಸಚ್ಛಬ್ದಾಭಿಧೇಯಮಿತಿ 'ಸತಾ ಸೋಮ್ಯ ತದಾ ಸಂಪನ್ನೋ ಭವತಿ ಸ್ವಮಪೀತೋ ಭವತಿ ಇತ್ಯುಚ್ಯತೇ। ತಥಾ ಸಮಾನಪ್ರಕರಣೇ ನಾಮರೂಪಪರಿಷ್ವಙ್ಗಾಭಾವೇನ ಪ್ರಾಜ್ಞೇನೈವ ಪರಿಷ್ವಙ್ಗಾತ್ 'ಪ್ರಾಜ್ಞೇನಾಽಽತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಮ್' (ಬೃ.೪-೩-೨೧) ಇತ್ಯುಚ್ಯತೇ। ಆಮೋಕ್ಷಾತ್ ಜೀವಸ್ಯ ನಾಮರೂಪಪರಿಷ್ವಙ್ಗಾದೇವ

1. 'ಚಿದಚಿದ್ವಸ್ತುಶರೀರಕಂ' ಎಂಬ ಪಾಠವು ಸರಿಯಲ್ಲ.
2. 'ಶ್ರುತ್ಯುಕ್ತಮ್' ಪಾ॥

ಹಿ ಸ್ವವ್ಯತಿರಿಕ್ತವಿಷಯಜ್ಞಾನೋದಯಃ । ಸುಷುಪ್ತಕಾಲೇ ಹಿ ನಾಮರೂಪೇ ವಿಹಾಯ ಸತಾ ಸಂಪರಿಷ್ವಕ್ತಃ ಪುನರಪಿ ಜಾಗರದಶಾಯಾಂ ನಾಮರೂಪೇ ಪರಿಷ್ವಜ್ಯ ತತ್ತನ್ನಾಮರೂಪೋ ಭವತೀತಿ ಶ್ರುತ್ಯನ್ತರೇ ಸ್ಪಷ್ಟಮಭಿಧೀಯತೇ । 'ಯದಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತ್ಯಥಾಸ್ಮಿನ್ ಪ್ರಾಣ ಏವೈಕಧಾ ಭವತಿ ....ಏತಸ್ಮಾದಾತ್ಮನಃ ಪ್ರಾಣಾ ಯಥಾಯತನಂ ವಿಪ್ರತಿಷ್ಠನ್ತೇ'.....[1] (ಕೌ. ೪-೧೯) । ತಥಾ 'ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ....ಯದ್ಯದ್ಭವನ್ತಿ ತದಾ ಭವನ್ತಿ'[2] (ಛಾಂ. ೬-೧೦-೨೨) ಇತಿ ॥

(ಅರ್ಥ)

ತನ್ನನ್ನು (ಸೇರಿ) ಲಯವಾದವನಾಗುತ್ತಾನೆ (ಸ್ವಮ್ ಅಪೀತೋ ಭವತಿ) ಎಂದರೆ ತನ್ನ ಆತ್ಮನನ್ನೇ ಜೀವನು ಸೇರಿ ಲಯವಾಗುತ್ತಾನೆ ಎಂದರ್ಥ. ಚಿದ್ವಸ್ತುವನ್ನು ಶರೀರವನ್ನಾಗಿ ಉಳ್ಳದ್ದಾಗಿ ಅವರ ಆತ್ಮವಾಗಿರುವ ಬ್ರಹ್ಮವೇ ಜೀವಶಬ್ದದಿಂದ ಹೇಳಲ್ಪಡುತ್ತದೆ ಎಂದು ನಾಮರೂಪವ್ಯಾಕರಣಶ್ರುತಿಯಿಂದ ಹೇಳಲ್ಪಟ್ಟಿರುತ್ತದೆ.[3] ಆ ಜೀವಶಬ್ದಕ್ಕೆ ವಾಚ್ಯವಾದ ಪರಬ್ರಹ್ಮವೇ ಪ್ರಲಯಕಾಲದಲ್ಲಿ ಹೇಗೋ ಹಾಗೆ ಸುಷುಪ್ತಿಕಾಲದಲ್ಲಿಯೂ ನಾಮರೂಪಗಳ ಅಪ್ಪುಗೆಯಿಲ್ಲದ್ದರಿಂದ ಬರಿಯ ಸತ್ತು ಎಂಬ ಶಬ್ದಕ್ಕೆ ಅಭಿಧೇಯವಾಗುತ್ತದೆ[4] ಯಾದ್ದರಿಂದ 'ಅಪ್ಪಾ, ಆಗ ಸತ್ತಿನೊಡನೆ ಸಂಪನ್ನನಾಗುತ್ತಾನೆ, ತನ್ನಲ್ಲಿ ಲಯವಾಗುತ್ತಾನೆ' ಎಂದು (ಶ್ರುತಿಯಲ್ಲಿ) ಹೇಳಿದೆ. ಹೀಗೆಯೇ (ಇದಕ್ಕೆ) ಸಮಾನವಾದ ಪ್ರಕರಣದಲ್ಲಿ (ಬೇರೊಂದು ಶ್ರುತಿಯಲ್ಲಿ)

---

1. ಇಲ್ಲಿ 'ಯಥಾ' ಎಂದು ಶ್ರುತಿವಾಕ್ಯದ ಹೊರಗಡೆಯಲ್ಲಿರುವ ಶಬ್ದವು 'ಯದಾ' ಎಂಬ ಶ್ರುತಿಯಲ್ಲಿರುವ ಶಬ್ದಕ್ಕೆ ಬದಲು ತಪ್ಪಾಗಿ ಅಚ್ಚಾಗಿರುತ್ತದೆ ; 'ಸುಪ್ತಃ' ಎಂಬುದರ ಬದಲು 'ಸುಷುಪ್ತಃ' ಎಂದು ಪಾಠಾಂತರವಿರುವದೂ ಹೀಗೆಯೇ ಕೈತಪ್ಪಿನಿಂದ ಬಿದ್ದಿರಬೇಕು. 'ಏತಸ್ಮಾದಾತ್ಮನಃ' ಎಂಬುದಕ್ಕೆ ಬದಲು 'ಏತಸ್ಮಾದ್ವಾ' ಎಂದು ತಪ್ಪಾಗಿ ಬಿದ್ದಿದೆ, 'ಯಥಾಯತನಂ' ಎಂಬುದರ ಬದಲು 'ಯಥಾಯಥಮ್' ಎಂದು ತಪ್ಪಾಗಿ ಬಿದ್ದಿದೆ, ಎಂದು ಶ್ರೀಭಾಷ್ಯ, ವೇದಾಂತಸಾರ- ಇವುಗಳ ಆ। ತೆ। ಪಾಠಗಳನ್ನು ಹೋಲಿಸಿದ್ದರಿಂದ ಕಂಡುಬರುತ್ತದೆ. ಇಲ್ಲಿ ನಾವು ಕೊಟ್ಟಿರುವದು ಆನಂದಾಶ್ರಮುದಲ್ಲಿ ಮುದ್ರಿತವಾಗಿರುವ ಶಾಂಖಾಯನಾರಣ್ಯಕ ೪-೧೯-೨೦ ; ನಿರ್ಣಯಸಾಗರದಲ್ಲಿ ಮುದ್ರಿತವಾಗಿರುವ ಕೌಷೀತಕಿ ಬ್ರಾಹ್ಮಣೋಪನಿಷತ್ ೧-೧೯- ಇವುಗಳನ್ನು ಅನುಸರಿಸಿದ್ದು. ನಿ॥ ಸಾ॥ ಪುಸ್ತಕದಲ್ಲಿಯೂ ಕೆಲವು ಅಚ್ಚಿನ ತಪ್ಪುಗಳಿವೆ.

2. 'ತಥಾ ಭವನ್ತಿ' ಎಂದು ಅಚ್ಚಿನ ಪುಸ್ತಕದ ಪಾಠವು ಸರಿಯಲ್ಲ.

3. ಈ ಜೀವಾತ್ಮನಾಗಿ ಪ್ರವೇಶಿಸಿ ನಾಮರೂಪಗಳನ್ನು ವ್ಯಾಕರಣಮಾಡುವೆನು ಎಂಬ ಶ್ರುತಿಯಲ್ಲಿ ಹೀಗೆಂದಿದೆ ಎಂದರ್ಥ.

4. ನಾಮರೂಪಪರಿಷ್ವಂಗವಾಗಿರುವ ಜೀವನೇ ಜೀವನು ; ಅದಿಲ್ಲದ ಜೀವನೇ ಸತ್ತು ಎಂದು ತಿಳಿಯಬಾರದು ; ಜೀವಶರೀರಕವಾದ ಬ್ರಹ್ಮವೇ ಸುಷುಪ್ತಿಯಲ್ಲಿ ಸತ್ತೆನಿಸಿಕೊಳ್ಳುತ್ತದೆ.

ನಾಮರೂಪಗಳ ಅಪ್ಪುಗೆಯಿಲ್ಲದ್ದರಿಂದ 'ಪ್ರಾಜ್ಞನಾದ ಆತ್ಮನೊಡನೆ ಅಪ್ಪುಗೆಯನ್ನು ಹೊಂದಿದವನಾಗಿ ಹೊರಗಿನದನ್ನು ಏನನ್ನೂ ಅರಿಯದೆ ಇರುತ್ತಾನೆ, ಒಳಗಿನದನ್ನೂ (ಅರಿಯದೆ) ಇರುತ್ತಾನೆ' (ಬೃ. ೪-೩-೨೧) ಎಂದಿರುತ್ತದೆ. **ಮೋಕ್ಷವಾಗುವವರೆಗೂ ಜೀವನಿಗೆ ನಾಮರೂಪಗಳ ಅಪ್ಪುಗೆಯಿಂದಲೇ ಅಲ್ಲವೆ, ತನಗಿಂತ ಬೇರೆಯಾದ ವಿಷಯದ ಜ್ಞಾನವುಂಟಾಗುತ್ತಿರುವದು ? ಸುಷುಪ್ತಿಕಾಲದಲ್ಲಿ ನಾಮರೂಪಗಳನ್ನು ಬಿಟ್ಟು ಸತ್ತಿನಿಂದ ಅಪ್ಪುಗೆಯನ್ನು ಹೊಂದಿ, ಮತ್ತೆ ಎಚ್ಚರದ ಅವಸ್ಥೆಯಲ್ಲಿ ನಾಮರೂಪಗಳನ್ನು ಅಪ್ಪಿಕೊಂಡು ಆಯಾ ನಾಮರೂಪಗಳುಳ್ಳವನಾಗುತ್ತಾನೆ** ಎಂದು ಬೇರೊಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದೆ: 'ಯಾವಾಗ ನಿದ್ರಿಸಿದವನು ಯಾವ ಕನಸನ್ನೂ ಕಾಣುವದಿಲ್ಲವೋ, ಆಗ ಈ ಪ್ರಾಣನಲ್ಲಿಯೇ[1] ಒಂದಾದವನಾಗುತ್ತಾನೆ..... ಈ ಆತ್ಮನಿಂದ ಪ್ರಾಣಗಳು[2] ತಮ್ಮತಮ್ಮ ಸ್ಥಾನಕ್ಕೆ ಬಂದು ಸೇರುತ್ತವೆ......'[3] (ಕೌ.೪-೧೯) ಮತ್ತು 'ಆ (ಪ್ರಜೆಗಳೆಲ್ಲರೂ) ಹುಲಿಯೋ, ಸಿಂಹವೋ, ತೋಳನೋ, ಕಾಡುಹಂದಿಯೋ..... ಯಾವಯಾವದಾಗಿರುತ್ತವೆಯೋ ಅದವೇ ಬಂದು ಆಗುತ್ತವೆ' (ಛಾಂ. ೬-೧೦-೨) ಎಂದೂ (ಹೇಳಿದೆ).

## ೧೧. ಗತಿಸಾಮಾನ್ಯಾತ್ (೧-೧-೧೧)

(ಮೂಲ)

೨೨. ಸಕಲೋಪನಿಷದ್ಗತಿಸಾಮಾನ್ಯಾತ್ ಅಸ್ಯಾಮಪ್ಯುಪನಿಷದಿ ನ ಪ್ರಧಾನಂ ಕಾರಣಮಿತಿ ಜ್ಞಾಯತೇ । 'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್ । ನಾನ್ಯತ್ಕಿಂಚನ ಮಿಷತ್ । ಸ ಈಕ್ಷತ ಲೋಕಾನ್ನು ಸೃಜಾ ಇತಿ ಸ ಇಮಾಲ್ಲೋಕಾನಸೃಜತ" (ಐ. ೧-೧), 'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧), 'ಸ ಕಾರಣಂ ಕರಣಾಧಿಪಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ' (ಶ್ವೇ. ೬-೯) ಇತ್ಯಾದಿಸಕಲೋಪನಿಷತ್ಸು ಸರ್ವೇಶ್ವರ ಏವ ಹಿ ಜಗತ್ಕಾರಣಮಿತಿ ಪ್ರತಿಪಾದ್ಯತೇ ॥ ೧೧ ॥

(ಅರ್ಥ)

### ೧೧. ಗತಿಸಾಮಾನ್ಯದಿಂದಲೂ (ಹೀಗೆ).

ಎಲ್ಲಾ ಉಪನಿಷತ್ತುಗಳಲ್ಲಿಯೂ ಗತಿಯು ಸಮಾನವಾಗಿರುವದರಿಂದಲೂ ಈ ಉಪನಿಷತ್ತಿನಲ್ಲಿಯೂ ಪ್ರಧಾನವು (ಸಚ್ಛಬ್ದವಾಚ್ಯವಾದ) ಕಾರಣವಲ್ಲವೆಂದು

---

1. ಪರಮಾತ್ಮನಲ್ಲಿಯೇ. 2. ಕರಣಗಳು.

3. ಪ್ರಾಣಗಳುಂಟಾಗುತ್ತವೆ, ಪ್ರಾಣಗಳಿಂದ ದೇವತೆಗಳು, ದೇವತೆಗಳಿಂದ ಲೋಕಗಳೂ ಉಂಟಾಗುತ್ತವೆ– ಎಂದು ಉಪನಿಷತ್ತಿನ ಪೂರ್ಣವಾಕ್ಯ ; ಈ ವಾಕ್ಯಕ್ಕೆ ಜೀವರುಗಳು ನಾಮರೂಪಗಳ ಸಂಬಂಧವನ್ನು ಪಡೆಯುತ್ತಾರೆ ಎಂದು ಅರ್ಥವೆಂದು ಭಾವ.

ಗೊತ್ತಾಗುತ್ತದೆ. 'ಇದು ಮೊದಲು ಆತ್ಮನೇ ಆಗಿತ್ತು; ಮತ್ತೆ ಯಾವದೊಂದೂ ಅಲುಗಾಡುವದು ಇರಲಿಲ್ಲ. ಅವನು ಲೋಕಗಳನ್ನು ಸೃಷ್ಟಿಸುವೆನು ಎಂದು ಯೋಚಿಸಿಕೊಂಡನು, ಅವನು ಈ ಲೋಕಗಳನ್ನು ಸೃಷ್ಟಿಮಾಡಿದನು' (ಐ. ೧-೧), 'ಆ ಈ ಆತ್ಮನಿಂದ ಆಕಾಶವುಂಟಾಯಿತು' (ತೈ. ೨-೧), 'ಆತ್ಮನೇ ಕಾರಣವು, ಕರಣಾಧಿಪತಿಗಳಿಗೆ ಅಧಿಪತಿಯು; ಅವನನ್ನುಂಟುಮಾಡುವವನು ಯಾರೂ ಇಲ್ಲ, ಅಧಿಪತಿಯೂ ಇಲ್ಲ' (ಶ್ವೇ. ೬-೯) ಎಂದು ಮುಂತಾದ ಸಕಲ ಉಪನಿಷತ್ತುಗಳಲ್ಲಿಯೂ ಸರ್ವೇಶ್ವರನೇ ಅಲ್ಲವೆ, ಜಗತ್ಕಾರಣವೆಂದು ಪ್ರತಿಪಾದಿತನಾಗಿರುತ್ತಾನೆ?

## ೧೨. ಶ್ರುತತ್ವಾಚ್ಚ (೧-೧-೧೨)

(ಮೂಲ)

೨೩. ಶ್ರುತಮೇವ ಹಿ ಅಸ್ಯಾಮುಪನಿಷದಿ 'ಆತ್ಮತಃ ಪ್ರಾಣಃ..... ಆತ್ಮತ ಆಕಾಶಃ.....' (ಛಾಂ. ೭-೨೬-೧) ಇತ್ಯಾದೌ ಆತ್ಮನ ಏವ ಸರ್ವೋತ್ಪತ್ತಿಃ। ಅತಃ ಪ್ರಧಾನಾತ್ ಅಚೇತನಾತ್ ಅರ್ಥಾನ್ತರಭೂತಃ ಸರ್ವಜ್ಞಃ ಪುರುಷೋತ್ತಮ ಏವ ಜಗತ್ಕಾರಣಂ ಬ್ರಹ್ಮೇತಿ ಸ್ಥಿತಮ್ ॥ ೧೨ ॥

(ಅರ್ಥ)

**೧೨. ಶ್ರುತವಾಗಿರುವದರಿಂದಲೂ (ಹೀಗೆ).**

ಈ ಉಪನಿಷತ್ತಿನಲ್ಲಿಯೂ 'ಆತ್ಮನಿಂದಲೇ ಪ್ರಾಣವು.....ಆತ್ಮನಿಂದಲೇ ಆಕಾಶವು...' (ಛಾಂ. ೭-೨೬-೧) ಎಂದು ಮುಂತಾಗಿರುವ (ವಾಕ್ಯ)ದಲ್ಲಿ ಆತ್ಮನಿಂದಲೇ ಎಲ್ಲವೂ ಉತ್ಪನ್ನವಾಗಿದೆಯೆಂದು ಹೇಳಿಯೇ ಇದೆಯಷ್ಟೆ? ಆದ್ದರಿಂದ ಅಚೇತನವಾದ ಪ್ರಧಾನಕ್ಕಿಂತಲೂ ಬೇರೆಯ ವಸ್ತುವಾದ ಸರ್ವಜ್ಞನಾದ ಪುರುಷೋತ್ತಮನೇ ಜಗತ್ಕಾರಣವಾದ ಬ್ರಹ್ಮವು ಎಂಬುದು ನಿಂತಿತು. ॥ ೧೨ ॥

# ಆನಂದಮಯಾಧಿಕರಣ

## ೧೩. ಆನನ್ದಮಯೋಽಭ್ಯಾಸಾತ್ (೧-೧-೧೩)

(ಮೂಲ)

೨೪. ಯದ್ಯಪಿ ಪ್ರಧಾನಾದರ್ಥಾನ್ತರಭೂತಸ್ಯ ಪ್ರತ್ಯಗಾತ್ಮನಶ್ಚೇತನಸ್ಯ ಈಕ್ಷಣಗುಣಯೋಗಃ ಸಂಭವತಿ, ತಥಾಪಿ ಪ್ರತ್ಯಗಾತ್ಮಾ ಬದ್ಧೋ ಮುಕ್ತಶ್ಚ ನ ಜಗತ್ಕಾರಣಮ್। 'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ' (ತೈ. ೨-೧) ಇತ್ಯಾರಭ್ಯ 'ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್। ಅನ್ಯೋಽನ್ತರ ಆತ್ಮಾಽಽನನ್ದಮಯಃ' (ತೈ. ೨-೫) ಇತ್ಯಸ್ಯ ಆನನ್ದಮಯತ್ವಪ್ರತಿಪಾದನಾತ್। ಕಾರಣತಯಾ ವ್ಯಪದಿಷ್ಟೋಽಯಮ್ ಆನನ್ದಮಯಃ ಪ್ರತ್ಯಗಾತ್ಮನೋಽರ್ಥಾನ್ತರಭೂತಃ ಸರ್ವಜ್ಞಃ ಪರಮಾತ್ಮೈವ! ಕುತಃ? ಅಭ್ಯಾ

ಸಾತ್। ಆನನ್ದಮಯಸ್ಯ ನಿರತಿಶಯದಶಾಶಿರಸ್ಕಾನನ್ದಮಯತ್ವೇನ ಅಭ್ಯಾಸಾತ್।
'.....ತೇ ಯೇ ಶತಂ ಪ್ರಜಾಪತೇರಾನನ್ದಾಃ। ಸ ಏಕೋ ಬ್ರಹ್ಮಣ ಆನನ್ದಃ।.....
ಯತೋ ವಾಚೋ ನಿವರ್ತನ್ತೇ। ಅಪ್ರಾಪ್ಯ ಮನಸಾ ಸಹ। ಆನನ್ದಂ ಬ್ರಹ್ಮಣೋ
ವಿದ್ವಾನ್। ನ ಬಿಭೇತಿ ಕುತಶ್ಚನ' (ತೈ. ೨-೯) ಇತಿ ಹಿ ವೇದ್ಯತ್ವೇನ ಅಭಿ
ಮಾನನ್ದಮಯೋಽನವಧಿಕಾತಿಶಯೋಽಭ್ಯಸ್ಯತೇ ॥೧೩॥

(ಅರ್ಥ)

**೧೩. ಆನಂದಮಯನು (ಪರಮಾತ್ಮನು), ಏಕೆಂದರೆ ಅಭ್ಯಾಸವಿದೆ.**

ಪ್ರಧಾನಕ್ಕಿಂತ ಬೇರೆಯಾದ ಚೇತನನಾದ ಪ್ರತ್ಯಗಾತ್ಮನಿಗೆ ಯೋಚಿಸುವಿಕೆ ಎಂಬ ಗುಣದ ಸಂಬಂಧವು ಹೊಂದುತ್ತದೆ, ನಿಜ; ಆದರೂ ಬದ್ಧನಾದ ಮತ್ತು ಮುಕ್ತನಾದ ಪ್ರತ್ಯಗಾತ್ಮನು ಜಗತ್ಕಾರಣನಲ್ಲ. ಏಕೆಂದರೆ 'ಆ ಈ ಆತ್ಮನಿಂದ ಆಕಾಶವುಂಟಾಯಿತು' (ತೈ. ೨-೧) ಎಂದು ಮೊದಲುಮಾಡಿ 'ಆ ಈ ವಿಜ್ಞಾನ ಮಯನಿಗಿಂತಲೂ ಇನ್ನೊಬ್ಬ ಒಳಗಿರುವ ಆನಂದಮಯನೆಂಬ ಆತ್ಮನುಂಟು' (ತೈ. ೨-೫) ಎಂದು ಈ (ಜಗತ್ಕಾರಣವು) ಆನಂದಮಯನೆಂದು ತಿಳಿಸಿರುತ್ತದೆ.

ಕಾರಣವೆಂದು ಹೇಳಿರುವ ಈ ಆನಂದಮಯನು ಪ್ರತ್ಯಗಾತ್ಮನಿಗಿಂತಲೂ ಬೇರೆಯಾಗಿರುವ ಸರ್ವಜ್ಞನಾದ ಪರಮಾತ್ಮನೇ. ಏಕೆಂದರೆ ಅಭ್ಯಾಸವಿದೆ, ಅಂದರೆ ಆನಂದಮಯನು ಮಿಗಿಲಿಲ್ಲದ ಸ್ಥಿತಿಯ ಆನಂದಮಯನೆಂದು ಅಭ್ಯಾಸ ಮಾಡಿ ಹೇಳಿದೆ. '.....ಆ ಪ್ರಜಾಪತಿಯ ನೂರು ಆನಂದಗಳಿವೆಯಲ್ಲ, ಅದು ಬ್ರಹ್ಮದ ಒಂದು ಆನಂದವು' (ತೈ. ೨-೮), 'ಯಾವದರಿಂದ ವಾಕ್ಕುಗಳು ಮನಸ್ಸಿ ನೊಡನೆ (ಅದನ್ನು) ಮುಟ್ಟಲಾರದೆ ಹಿಂತಿರುಗುತ್ತವೆಯೋ, ಬ್ರಹ್ಮದ ಆ ಆನಂದ ವನ್ನು ಅರಿತುಕೊಂಡವನು ಏತಕ್ಕೂ ಅಂಜುವದಿಲ್ಲ' (ತೈ. ೨-೯) ಎಂದಲ್ಲವೆ. ಮಿಗಿಲಿಲ್ಲದಷ್ಟು ಅತಿಶಯವುಳ್ಳ ಆನಂದಮಯನನ್ನು ಅಭ್ಯಾಸಮಾಡಿ ಹೇಳಿದೆ?

## ೧೪. ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ (೧-೧-೧೪)

(ಮೂಲ)

೨೫. 'ಸ ವಾ ಏಷ ಪುರುಷೋಽನ್ನರಸಮಯಃ' (ತೈ. ೨-೧) ಇತಿ ವಿಕಾರಾರ್ಥಮಯಟ್ಪ್ರಕರಣಾತ್ 'ಆನನ್ದಮಯಃ' ಇತ್ಯಸ್ಯಾಪಿ ವಿಕಾರಾರ್ಥತ್ವಂ ಪ್ರತೀಯತೇ। ಅತೋಽಯಮಾನನ್ದಮಯೋ ನಾವಿಕಾರರೂಪಃ ಪರಮಾತ್ಮಾ ಇತಿ ಚೇತ್। ನ। ಅರ್ಥವಿರೋಧಾತ್ ಪ್ರಾಚುರ್ಯಾರ್ಥ ಏವಾಯಂ ಮಯಡಿತಿ ವಿಜ್ಞಾಯತೇ। 'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ' (ತೈ. ೨-೧) ಇತಿ ಹಿ ಅವಿಕಾರ ಆತ್ಮಾ ಪ್ರಕೃತಃ। ಪ್ರಕರಣೇ ಚ ವಿಕಾರಾರ್ಥತ್ವಂ ಪ್ರಾಣ ಮಯ ಏವ ಪರಿತ್ಯಕ್ತಮ್। ಉಕ್ತೇನ ನ್ಯಾಯೇನ ಆನನ್ದಪ್ರಾಚುರ್ಯಾತ್ ಪರಮಪುರುಷ ಏವಾಯಮ್ ಆನನ್ದಮಯಃ ॥೧೪॥

(ಅರ್ಥ)

**೧೪. ವಿಕಾರ(ವನ್ನು ಹೇಳುವ) ಶಬ್ದವಿರುವದರಿಂದ (ಪರಮಾತ್ಮನಲ್ಲ) ಎಂದರೆ ಹಾಗಲ್ಲ; ಏಕೆಂದರೆ ಪ್ರಾಚುರ್ಯ(ವೆಂಬ ಅರ್ಥವಿದೆ).**

'ಆ ಈ ಅನ್ನರಸಮಯನಾದ ಪುರುಷನಿವನಷ್ಟೆ ?' (ತೈ. ೨-೧) ಎಂದು ವಿಕಾರಾರ್ಥವನ್ನು ಹೇಳುವ ಮಯಟ್ಪ್ರತ್ಯಯದ ಪ್ರಕರಣವಿದಾದ್ದರಿಂದ[1] 'ಆನಂದಮಯನು' ಎಂಬಿದೂ ವಿಕಾರವೆಂಬರ್ಥವನ್ನೇ (ಹೇಳುತ್ತದೆ ಎಂದು) ತಿಳಿಯಬರುತ್ತದೆ. ಆದ್ದರಿಂದ ಈ ಆನಂದಮಯನು ಅವಿಕಾರರೂಪನಾದ ಪರಮಾತ್ಮನಲ್ಲ ಎನ್ನುವದಾದರೆ, ಹಾಗಲ್ಲ; ಏಕೆಂದರೆ (ವಿಕಾರವೆಂಬ) ಅರ್ಥವು ವಿರುದ್ಧವಾಗುವದರಿಂದ ಈ ಮಯಟ್ಪ್ರತ್ಯಯಕ್ಕೆ ಪ್ರಾಚುರ್ಯವೆಂಬರ್ಥವೇ[2] ಎಂದು ಗೊತ್ತಾಗುತ್ತದೆ. 'ಆ ಈ ಆತ್ಮನಿಂದ ಆಕಾಶವು ಉಂಟಾಯಿತು' (ತೈ. ೨-೧) ಎಂಬ ವಿಕಾರವಲ್ಲದ ಪರಮಾತ್ಮನಲ್ಲವೆ, ಪ್ರಕೃತನಾಗಿರುತ್ತಾನೆ[3] ? ಪ್ರಕರಣದಲ್ಲಿ (ಮಯಟ್ಪ್ರತ್ಯಯಕ್ಕೆ) ವಿಕಾರವೆಂಬ ಅರ್ಥವನ್ನು ಪ್ರಾಣಮಯನಲ್ಲಿಯೇ ಬಿಟ್ಟುಬಿಟ್ಟಿದೆ.[4] (ಈ) ಹೇಳಿದ ನ್ಯಾಯದಿಂದ[5] ಆನಂದಪ್ರಾಚುರ್ಯವುಳ್ಳವನೇ ಆಗಿರುವದರಿಂದ ಈ ಆನಂದಮಯನು ಪರಮಪುರುಷನೇ. ॥ ೧೪ ॥

## ೧೫. ತದ್ಧೇತುವ್ಯಪದೇಶಾಚ್ಚ (೧-೧-೧೫)

(ಮೂಲ)

೨೬. 'ಏಷ ಹ್ಯೇವಾನನ್ದಯಾತಿ' (ತೈ. ೨-೭) ಇತಿ ಜೀವಾನ್ ಪ್ರತ್ಯಾನನ್ದಹೇತುರಯಮಾನನ್ದಮಯೋ ವ್ಯಪದಿಶ್ಯತೇ । ಅತಶ್ಚಾಯಂ ನ ಪ್ರತ್ಯಗಾತ್ಮಾ।

(ಅರ್ಥ)

**೧೫. ಆ (ಜೀವರ ಆನಂದಕ್ಕೆ) ಹೇತು(ವೆಂದು) ಹೇಳಿರುವದರಿಂದಲೂ.**

---

1. ಶರೀರವು ಅನ್ನದ ವಿಕಾರವು ಎಂದರೆ ಕಾರ್ಯವು; ಆದ್ದರಿಂದ ಅನ್ನಮಯದಿಂದ ಆನಂದಮಯನವರೆಗೂ 'ಮಯ' ಎಂಬ ಅದೇ ಪ್ರತ್ಯಯವಿರುವದರಿಂದ ಇಲ್ಲಿಯೂ ಅದಕ್ಕೆ ವಿಕಾರವೆಂಬರ್ಥವೇ ಇರಬೇಕು.

2. ಮಯಟ್ಪ್ರತ್ಯಯಕ್ಕೆ (ಎಂದರೆ ಮಯ ಎಂಬೀ ಪ್ರತ್ಯಯಕ್ಕೆ) ವಿಕಾರವೆಂಬುದೊಂದೇ ಅರ್ಥವಲ್ಲ; ಪ್ರಾಚುರ್ಯವೆಂಬರ್ಥವೂ ಇದೆ. (ಪಾ. ಸೂ. ೫-೪-೨೧).

3. ಪರಮಪ್ರಕರಣವು ಪರಮಾತ್ಮನದೇ.

4. ಅನ್ನಮಯದಿಂದ ವಿಕಾರಾರ್ಥದ ಪ್ರಕರಣವೇ ಇದೆ ಎಂಬುದು ಸರಿಯಲ್ಲ: ಏಕೆಂದರೆ ಅದರ ಮುಂದಿನ ಪ್ರಾಣಮಯನು ಪ್ರಾಣದ ವಿಕಾರವೇನೂ ಅಲ್ಲ; ಪ್ರಾಣವೃತ್ತಿಗಳುಳ್ಳವನು.

5. ಪರಮಾತ್ಮನೇ ಪ್ರಕೃತನಾಗಿರುತ್ತಾನೆ, ವಿಕಾರಾರ್ಥವು ಹೊಂದುವದೂ ಇಲ್ಲ, ವಿಕಾರಾರ್ಥದ ಪ್ರಕರಣವೂ ಇಲ್ಲ- ಎಂಬೀ ಯುಕ್ತಿಯಿಂದ ಎಂದರ್ಥ.

'ಇವನೇ ಆನಂದಪಡಿಸುತ್ತಾನೆ' (ತೈ. ೨-೭) ಎಂದು ಜೀವರುಗಳಿಗೆ ಈ ಆನಂದಮಯನು ಆನಂದಕ್ಕೆ ಕಾರಣವಾಗಿರುತ್ತಾನೆ ಎಂದು (ಇಲ್ಲಿ) ಹೇಳಿರುತ್ತದೆ. ಆದ್ದರಿಂದಲೂ (ಇವನು) ಪ್ರತ್ಯಗಾತ್ಮನಲ್ಲ. ॥ ೧೫ ॥

## ೧೬. ಮಾನ್ತ್ರವರ್ಣಿಕಮೇವ ಚ ಗೀಯತೇ (೧-೧-೧೬)

(ಮೂಲ)

೨೭. 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' (ತೈ. ೨-೧) ಇತಿ ಮನ್ತ್ರವರ್ಣೋದಿತಮೇವ 'ತಸ್ಮಾದ್ವಾ ಏತಸ್ಮಾತ್' (ತೈ. ೨-೫) ಇತ್ಯಾದಿನಾ ಆನನ್ದಮಯ ಇತಿ ಗೀಯತೇ। ಅತಶ್ಚ ನ ಪ್ರತ್ಯಗಾತ್ಮಾ ॥ ೧೬ ॥

(ಅರ್ಥ)

### ೧೬. ಮತ್ತು ಮಂತ್ರವರ್ಣದಲ್ಲಿರುವವನನ್ನೇ ಹೇಳಿರುತ್ತದೆ.

'ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು' (ತೈ. ೨-೧) ಎಂದು ಮಂತ್ರವರ್ಣದಲ್ಲಿ ಹೇಳಿರುವದನ್ನೇ 'ಆ ಈ (ವಿಜ್ಞಾನಮಯ)ನಿಗಿಂತಲೂ ಬೇರೆ' (ತೈ. ೨-೫) ಎಂದು ಮುಂತಾಗಿರುವ (ವಾಕ್ಯ)ದಿಂದ ಆನಂದಮಯನೆಂದು ಹೇಳಿರುತ್ತದೆ. ಆದ್ದರಿಂದಲೂ (ಆನಂದಮಯನು) ಪ್ರತ್ಯಗಾತ್ಮನಲ್ಲ. ॥ ೧೬ ॥

## ೧೭. ನೇತರೋಽನುಪಪತ್ತೇಃ (೧-೧-೧೭)

(ಮೂಲ)

೨೮. ಇತರಃ ಪ್ರತ್ಯಗಾತ್ಮಾ ಮನ್ತ್ರವರ್ಣೋದಿತ ಇತಿ ನಾಶಙ್ಕನೀಯಮ್ 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ' (ತೈ. ೨-೧) ಇತಿ ಪ್ರತ್ಯಗಾತ್ಮನೋ ಬದ್ಧಸ್ಯ ಮುಕ್ತಸ್ಯ ಚ ಈದೃಶವಿಪಶ್ಚಿತ್ತ್ವಾನುಪಪತ್ತೇಃ। 'ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯ' (ತೈ. ೨-೬) ಇತಿ ವಿಚಿತ್ರಸ್ಥಿರತ್ರಸರೂಪಬಹುಭವನಸಙ್ಕಲ್ಪರೂಪಮಿದಂ ವಿಪಶ್ಚಿತ್ತ್ವಮ್ ಇತಿ ಹ್ಯತ್ರಾವಗಮ್ಯತೇ। ಮುಕ್ತಸ್ಯ ಸರ್ವಜ್ಞಸ್ಯಾಪಿ ಜಗದ್ವ್ಯಾಪಾರಾಭಾವಾತ್ ಈದೃಶವಿಪಶ್ಚಿತ್ತ್ವಾಸಂಭವಃ ॥ ೧೭ ॥

(ಅರ್ಥ)

### ೧೭. ಇನ್ನೊಬ್ಬನಲ್ಲ, ಏಕೆಂದರೆ ಹೊಂದುವದಿಲ್ಲ.

ಇನ್ನೊಬ್ಬನು ಎಂದರೆ ಪ್ರತ್ಯಗಾತ್ಮನು (ಆ) ಮಂತ್ರವರ್ಣದಲ್ಲಿ ಹೇಳಿದವನೇ ಎಂದು ಶಂಕಿಸುವಹಾಗಿಲ್ಲ. ಏಕೆಂದರೆ 'ಅವನು ಸರ್ವಕಾಮಗಳನ್ನೂ ವಿಪಶ್ಚಿತನಾದ[1] ಬ್ರಹ್ಮದೊಡನೆ ಪಡೆದುಕೊಳ್ಳುತ್ತಾನೆ' (ತೈ. ೨-೧) ಎಂದು (ಹೇಳಿದೆ

1. ಮಹಾಜ್ಞಾನಿಯಾದ ಎಂದರ್ಥ. ವಿವಿಧವಾಗಿ ಕಾಣಬಲ್ಲ ಚಿತ್ತಾಗಿರುವದೇ ವಿಪಶ್ಚಿತ್ತ್ವವು ಎಂದು ಶ್ರೀಭಾಷ್ಯ.

ಯಲ್ಲ), ಬದ್ಧನಾಗಿರುವ ಅಥವಾ ಮುಕ್ತನಾದ ಪ್ರತ್ಯಗಾತ್ಮನಿಗೆ ಇಂಥ ವಿಪಶ್ಚಿತ್ತ್ವವು ಹೊಂದುವಹಾಗಿಲ್ಲವಷ್ಟೆ ? ಈ ವಿಪಶ್ಚಿತ್ತ್ವವು 'ಬಹುವಾಗುವೆನು, ಹುಟ್ಟುವೆನು -ಎಂದು ಅವನು ಬಯಸಿದನು' (ತೈ. ೨-೬) ಎಂದು ಬಗೆಬಗೆಯಾದ ಸ್ಥಾವರಜಂಗಮರೂಪವಾಗಿ ಬಹುವಾಗುವೆನೆಂದು ಸಂಕಲ್ಪಿಸುವ ರೂಪದ್ದು ಎಂದಲ್ಲವೆ, ಮುಂದೆ ವ್ಯಕ್ತವಾಗಿರುವದು ? ಮುಕ್ತನಾದ (ಪ್ರತ್ಯಗಾತ್ಮನು) ಸರ್ವಜ್ಞನಾದರೂ (ಅವನಿಗೆ) ಜಗದ್ವ್ಯಾಪಾರವು[1] ಇಲ್ಲದಿರುವದರಿಂದ ಇಂಥ ವಿಪಶ್ಚಿತ್ತ್ವವು ಸಂಭವಿಸುವದೇ ಇಲ್ಲ. ॥ ೧೭ ॥

## ೧೮. ಭೇದವ್ಯಪದೇಶಾಚ್ಚ (೧-೧-೧೮)

(ಮೂಲ)

೨೯. ಇತಶ್ಚ 'ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್। ಅನ್ಯೋಽನ್ತರ ಆತ್ಮಾಽಽನನ್ದಮಯಃ' (ತೈ. ೨-೫) ಇತಿ ಹಿ ವಿಜ್ಞಾನಮಯಾತ್ ಪ್ರತ್ಯಗಾತ್ಮನೋ ಭೇದೇನಾಯಮಾನನ್ದಮಯೋ ವ್ಯಪದಿಶ್ಯತೇ ॥ ೧೮ ॥

(ಅರ್ಥ)

**೧೮. ಬೇರೆಯಾಗಿ ಹೇಳಿರುವದರಿಂದಲೂ.**

ಇದರಿಂದಲೂ (ಇವನು ಪ್ರತ್ಯಗಾತ್ಮನಲ್ಲ), 'ಆ ಈ ವಿಜ್ಞಾನಮಯನಿಗಿಂತಲೂ ಮತ್ತೊಬ್ಬ ಒಳಗಿನ ಆನಂದಮಯನೆಂಬ ಆತ್ಮನುಂಟು' (ತೈ. ೨-೫) ಎಂದು ವಿಜ್ಞಾನಮಯನಾದ ಪ್ರತ್ಯಗಾತ್ಮನಿಗಿಂತಲೂ ಬೇರೆಯಾಗಿ ಆನಂದಮಯನನ್ನು ಹೇಳಿರುತ್ತದೆಯಲ್ಲವೆ ?

(ಮೂಲ)

೩೦. ನ ಚ ವಿಜ್ಞಾನಮಯವಿಷಯತಯಾ ಉದಾಹೃತಶ್ಲೋಕೇ 'ವಿಜ್ಞಾನಂ ಯಜ್ಞಂ ತನುತೇ' (ತೈ. ೨-೫) ಇತಿ ವ್ಯಪದೇಶಾತ್ ವಿಜ್ಞಾನಮಯೋ ಬುದ್ಧಿಮಾತ್ರಮ್ ಇತ್ಯಾಶಙ್ಕನೀಯಮ್, ಯತಃ ಸೂತ್ರಕಾರ ಏವ ಇಮಾಮಾಶಙ್ಕಾಂ ಪರಿಹರಿಷ್ಯತಿ 'ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶವಿಪರ್ಯಯಃ' (ವೇ. ಸೂ. ೨-೩-೩೫) ಇತಿ। 'ವಿಜ್ಞಾನಂ ಯಜ್ಞಂ ತನುತೇ' ಇತಿ ಯಜ್ಞಾದಿಕ್ರಿಯಾಯಾಂ ಜೀವಸ್ಯ ಕರ್ತೃತ್ವವ್ಯಪದೇಶಾಚ್ಚ ಜೀವಃ ಕರ್ತಾ। ವಿಜ್ಞಾನಶಬ್ದೇನ ಜೀವಸ್ಯಾವ್ಯಪದೇಶೇ[2] ಬುದ್ಧಿಮಾತ್ರವ್ಯಪದೇಶೇ ಚ ವಿಜ್ಞಾನೇನ ಇತಿ ನಿರ್ದೇಶವಿಪರ್ಯಯಃ ಸ್ಯಾತ್। ಬುದ್ಧೇಃ ಕರಣತ್ವಾತ್ ಇತಿ।

---

1. ಜಗತ್ತಿನ ಸೃಷ್ಟಿಸ್ಥಿತಿಸಂಹಾರಗಳನ್ನು ಮಾಡುವದು ಎಂದರ್ಥ.
2. 'ಜೀವಸ್ಯಾವ್ಯಪದೇಶೇ' ಎಂಬ ಪಾಠಕ್ಕಿಂತ ಈ ತೆ॥ ಪಾಠವು ಉತ್ತಮ.

(ಅರ್ಥ)

ವಿಜ್ಞಾನಮಯನ ವಿಷಯವಾಗಿ ಉದಾಹರಿಸಿರುವ ಮಂತ್ರದಲ್ಲಿ 'ವಿಜ್ಞಾನವು ಯಜ್ಞವನ್ನು ಮಾಡುತ್ತದೆ' (ತೈ. ೨-೫) ಎಂದು ಹೇಳಿರುವದರಿಂದ ವಿಜ್ಞಾನಮಯವೆಂದರೆ (ಅಲ್ಲಿ) ಬರಿಯ ಬುದ್ಧಿಯೇ ಎಂದು ಆಶಂಕೆಮಾಡಬಾರದು. ಏಕೆಂದರೆ **ಸೂತ್ರಕಾರರೇ** ಈ ಆಶಂಕೆಗೆ 'ಕ್ರಿಯೆಯಲ್ಲಿ (ಕರ್ತೃವೆಂದು) ಹೇಳಿರುವದರಿಂದಲೂ (ಕರ್ತೃ); ಹಾಗಿಲ್ಲದಿದ್ದರೆ (ಇದಕ್ಕೆ) ವಿಪರೀತವಾಗಿ ನಿರ್ದೇಶ (ಮಾಡಬೇಕಿತ್ತು)' (ವೇ. ಸೂ. ೨-೩-೩೬) ಎಂದು ಪರಿಹಾರವನ್ನು ಹೇಳಿರುತ್ತಾರೆ. 'ವಿಜ್ಞಾನವು ಯಜ್ಞವನ್ನು ಮಾಡುತ್ತದೆ' ಎಂಬಲ್ಲಿ ಯಜ್ಞವೇ ಮುಂತಾದ ಕರ್ಮಕ್ಕೆ ಜೀವನು ಕರ್ತೃವೆಂದು ಹೇಳಿರುವದರಿಂದಲೂ ಜೀವನು ಕರ್ತೃವೇ: ವಿಜ್ಞಾನಶಬ್ದದಿಂದ ಜೀವನನ್ನು ಹೇಳದೆ ಬರಿಯ ಬುದ್ಧಿಯನ್ನೇ ಹೇಳುವದಾದಲ್ಲಿ 'ವಿಜ್ಞಾನದಿಂದ' ಎಂದು (ಇದಕ್ಕೆ) ವಿಪರೀತವಾಗಿ (ತೃತೀಯಾವಿಭಕ್ತಿಯಿಂದ) ನಿರ್ದೇಶಮಾಡಬೇಕಾಗುತ್ತಿತ್ತು; ಏಕೆಂದರೆ ಬುದ್ಧಿಯು ಕರಣವು[1] –ಎಂದು (ಸೂತ್ರದ ಅರ್ಥ). ॥ ೧೮ ॥

## ೧೯. ಕಾಮಾಚ್ಚ ನಾನುಮಾನಾಪೇಕ್ಷಾ (೧-೧-೧೯)

(ಮೂಲ)

೩೧. ಇತಶ್ಚ । 'ಸೋಽಕಾಮಯತ । ಬಹು ಸ್ಯಾಮ್' (ತೈ. ೨-೬) ಇತಿ ಸ್ವಕಾಮಾದೇವ ಅಸ್ಯ ಜಗತ್ಸರ್ಗಃ ಶ್ರೂಯತೇ । ಪ್ರತ್ಯಗಾತ್ಮನೋ ಹಿ ಯಸ್ಯ ಕಸ್ಯಚಿತ್ಸರ್ಗೇ ಅನುಮಾನಾಪೇಕ್ಷಾ ದೃಶ್ಯತೇ । ಅನುಮಾನಗಮ್ಯಂ ಪ್ರಧಾನಮ್ ಅನುಮಾನಮ್ ॥ ೧೯ ॥

(ಅರ್ಥ)

**೧೯. ಕಾಮದಿಂದಲೇ (ಸೃಷ್ಟಿಯನ್ನು ಹೇಳಿರುವ)ದರಿಂದಲೂ ಅನುಮಾನದ ಅಪೇಕ್ಷೆಯಿಲ್ಲ.**

ಈ ಕಾರಣದಿಂದಲೂ (ಆನಂದಮಯನು ಪ್ರತ್ಯಗಾತ್ಮನಲ್ಲ). ಏಕೆಂದರೆ 'ಬಹುವಾಗುವೆನು ಎಂದು ಅವನು ಇಚ್ಛಿಸಿದನು' (ತೈ. ೨-೬) ಎಂದು ಬಯಸಿದ ಮಾತ್ರದಿಂದಲೇ ಜಗತ್ಸೃಷ್ಟಿಯಾಯಿತೆಂದು ಇಲ್ಲಿ ಹೇಳಿದೆ. ಪ್ರತ್ಯಗಾತ್ಮನಿಗೆ ಯಾವದಾದರೊಂದು ಸೃಷ್ಟಿಯನ್ನು ಮಾಡಬೇಕಾಗಿದ್ದರೆ ಅನುಮಾನದ ಅಪೇಕ್ಷೆ

---

1. ಬುದ್ಧಿಯು ಕರಣವಾದ್ದರಿಂದ ತೃತೀಯಾವಿಭಕ್ತಿಯಿಂದ ಅದನ್ನು ಹೇಳಬೇಕು. ಆದರೆ ಇಲ್ಲಿ 'ವಿಜ್ಞಾನವು' ಎಂದು ಕರ್ತೃವನ್ನು ಹೇಳುವ ಪ್ರಥಮಾವಿಭಕ್ತಿಯಿಂದ ಹೇಳಿರುವದರಿಂದ ಇದು ಜೀವನೇ.

ಯಿರುವದು ಕಂಡುಬರುತ್ತದೆಯುಲ್ಲವೆ[1] ? ಅನುಮಾನದಿಂದ ತಿಳಿಯುಬರುವ ಪ್ರಧಾನವನ್ನು (ಇಲ್ಲಿ) ಆನುಮಾನ(ವೆಂದಿದೆ). ॥ ೧೯ ॥

## ೨೦. ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ (೧-೧-೨೦)

(ಮೂಲ)

೩೨. ಇತಶ್ಚ । ಅಸ್ಮಿನ್ ಆನನ್ದಮಯೇ ಅಸ್ಯ ಪ್ರತ್ಯಗಾತ್ಮನಃ ಆನನ್ದಯೋಗಂ ಶಾಸ್ತಿ 'ರಸೋ ವೈ ಸಃ। ರಸಂ ಹ್ಯೇವಾಯಂ ಲಬ್ಧ್ವಾಽಽನನ್ದೀ ಭವತಿ' (ತೈ. ೨-೭) ಇತಿ । ಅತಃ ಪ್ರತ್ಯಗಾತ್ಮನೋಽರ್ಥಾನ್ತರಭೂತಃ ಸರ್ವಜ್ಞಃ ಪುರುಷೋತ್ತಮೋ ಜಗತ್ಕಾರಣಭೂತ ಆನನ್ದಮಯಃ ॥ ೨೦ ॥

(ಅರ್ಥ)

**೨೦. ಇವನಲ್ಲಿ ಇವನಿಗೆ ಅದರ ಯೋಗವನ್ನು (ಶಾಸ್ತ್ರವು) ಹೇಳುತ್ತಿದೆ.**

ಈ ಕಾರಣದಿಂದಲೂ (ಆನಂದಮಯನು ಪ್ರತ್ಯಗಾತ್ಮನಲ್ಲ). ಈ ಆನಂದಮಯನಲ್ಲಿ ಈ ಪ್ರತ್ಯಗಾತ್ಮನಿಗೆ ಆನಂದದ ಸಂಬಂಧವಾಗುವದೆಂದು 'ಆತನು ರಸವು ; ರಸವನ್ನು ಪಡೆದುಕೊಂಡಲ್ಲವೆ, ಇವನು ಆನಂದಿಯಾಗುತ್ತಾನೆ ?' (ತೈ. ೨-೭) ಎಂಬ (ಶಾಸ್ತ್ರವು) ಹೇಳುತ್ತಿದೆ. ಆದ್ದರಿಂದ ಪ್ರತ್ಯಗಾತ್ಮನಿಗಿಂತಲೂ ಬೇರೆಯಾಗಿರುವ, ಸರ್ವಜ್ಞನಾದ ಜಗತ್ಕಾರಣಭೂತನಾದ ಪುರುಷೋತ್ತಮನೇ ಆನಂದಮಯನು. ॥ ೨೦ ॥

# ಅನ್ತರಧಿಕರಣ

## ೨೧. ಅನ್ತಸ್ತದ್ಧರ್ಮೋಪದೇಶಾತ್ (೧-೧-೨೧)

(ಮೂಲ)

೩೩. ಅಯಂ ಜಗತ್ಕಾರಣಭೂತೋ ವಿಪಶ್ಚಿತ್ ಆನನ್ದಮಯಃ ಕಶ್ಚಿದುಪಚಿತಪುಣ್ಯವಿಶೇಷೋ ಜೀವವಿಶೇಷೋ ದೇಹಯೋಗಾದ್ ವಿಜ್ಞಾಯತೇ ನಾಯಂ ಪರಮಾತ್ಮಾ ಇತಿ ನಾಶಙ್ಕನೀಯಮ್ । 'ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷಃ' (ಛಾಂ. ೧-೬-೬) ಇತ್ಯಾದೌ ಶ್ರೂಯಮಾಣಃ ಪುರುಷಾಕಾರಃ ಪರಮಾತ್ಮೈವ । ಕುತಃ ? ತದ್ಧರ್ಮೋಪದೇಶಾತ್ । 'ಸ ಏಷ ಸರ್ವೇಷಾಂ ಲೋಕಾನಾಮೀಶಃ ಸರ್ವೇಷಾಂ ಕಾಮಾನಾಮ್' (?)[2], ತಸ್ಯೋದಿತಿ ನಾಮ

---

1. ಆದರೆ ಇಲ್ಲಿ ಯಾವ ಅಪೇಕ್ಷೆಯೂ ಇಲ್ಲದೆ ಸೃಷ್ಟಿಮಾಡಿದನೆಂದು ಹೇಳಿದುತ್ತದೆಯಾದ್ದರಿಂದ ಇದು ಪ್ರತ್ಯಗಾತ್ಮನಲ್ಲವೆಂದಾಯಿತು ಎಂದು ಭಾವ.

2. ಇದು ಪ್ರತ್ಯರ್ಥ ; ಛಾಂ. ೧-೬-೮, ೧-೭-೬ – ಇವುಗಳ ಅರ್ಥವನ್ನು ತಿಳಿಸಿದೆ. ಅನುವಾದದ ಟಿಪ್ಪಣಿಯನ್ನು ನೋಡಿರಿ.

ಸ ಏಷ ಸರ್ವೇಭ್ಯಃ ಪಾಪ್ಮಭ್ಯ ಉದಿತಃ' (ಛಾಂ. ೧-೬-೭) ಇತಿ ನಿರುಪಾಧಿಕ ಸರ್ವಲೋಕಸರ್ವಕಾಮೇಶತ್ವಂ ಸ್ವತ ಏವ ಅಕರ್ಮವಶ್ಯತ್ವಂ ಚ ಪ್ರತ್ಯಗಾತ್ಮನೋಽರ್ಥಾನ್ತರಭೂತಸ್ಯ ಹಿ ಪರಮಪುರುಷಸ್ಯೈವ ಧರ್ಮಃ । 'ವೇದಾಹಮೇತಂ ಪುರುಷಂ ಮಹಾನ್ತಮ್ । ಆದಿತ್ಯವರ್ಣಂ ತಮಸಃ ಪರಸ್ತಾತ್' (ತೈ. ಆ. ೩-೧೩-೩೯) ಇತ್ಯಾದಿಷು ತ್ರಿಗುಣಾತ್ಮಕಪ್ರಕೃತ್ಯನನ್ತರ್ಗತಾಪ್ರಾಕೃತಸ್ವಾಸಾಧಾರಣರೂಪವತ್ತ್ವಂ ಚ ಜ್ಞಾನಾದಿಗುಣವತ್ ತಸ್ಯೈವ ಹಿ ಶ್ರೂಯತೇ ಜ್ಞಾನಾದಯೋಽಪಿ 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' (ತೈ. ೨-೧), 'ಯಃ ಸರ್ವಜ್ಞಃ ಸರ್ವವಿತ್' (ಮುಂ. ೧-೧-೯), 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' (ಶ್ವೇ. ೬-೮) ಇತ್ಯಾದಿಷು ಶ್ರುತತ್ವಾತ್ ತಸ್ಯ ಗುಣಾ ವಿಜ್ಞಾಯನ್ತೇ । ತಥಾ 'ಆದಿತ್ಯವರ್ಣಂ ತಮಸಃ ಪರಸ್ತಾತ್' (ತೈ. ಆ. ೩-೧೩-೩೯) ಇತ್ಯಾದಿಷು ಅಪ್ರಾಕೃತಸ್ವಾಸಾಧಾರಣರೂಪಶ್ರವಣಾತ್ ತದ್ವತ್ತ್ವಾ ಚ ವಿಜ್ಞಾಯತೇ ॥ ೨೧ ॥

(ಅರ್ಥ)

**೨೧. ಒಳಗೆ (ಇರುವವನು ಪರಮಾತ್ಮನೇ), ಏಕೆಂದರೆ ಅವನ ಧರ್ಮವನ್ನು ಉಪದೇಶ(ಮಾಡಿರುತ್ತದೆ).**

ಈ ಜಗತ್ಕಾರಣನಾಗಿರುವ ವಿಪಶ್ಚಿತನಾದ ಆನಂದಮಯನು ಹೆಚ್ಚಾಗಿ ಪುಣ್ಯವಿಶೇಷವನ್ನು ಕೂಡಿಹಾಕಿಕೊಂಡಿರುವ ಒಬ್ಬಾನೊಬ್ಬ ಜೀವನು ಎಂದು ಶರೀರಸಂಬಂಧವಿರುವದರಿಂದ ಗೊತ್ತಾಗುತ್ತದೆ : (ಆದ್ದರಿಂದ) ಇವನು ಪರಮಾತ್ಮನಲ್ಲ ಎಂದು ಶಂಕಿಸಬಾರದು.

'ಆದಿತ್ಯನೊಳಗೆ ಈ ಹಿರಣ್ಮಯಪುರುಷನು ಕಾಣಿಸುತ್ತಿದ್ದಾನಲ್ಲ' (ಛಾಂ. ೧-೬-೬) ಎಂದು ಮುಂತಾಗಿರುವ ವಾಕ್ಯದಲ್ಲಿ ಶ್ರುತಿಯು ಹೇಳಿರುವ ಪುರುಷಾಕಾರವುಳ್ಳವನು ಪರಮಾತ್ಮನೇ ; ಏಕೆಂದರೆ ಅವನ ಧರ್ಮವನ್ನು ಉಪದೇಶ ಮಾಡಿರುತ್ತದೆ. 'ಆ ಇವನು ಸರ್ವಲೋಕಗಳಿಗೂ ಈಶನು, ಸರ್ವಕಾಮಗಳಿಗೂ (ಈಶನು)' ಅವನಿಗೆ ಉತ್ ಎಂದು ಹೆಸರು ; ಆತನು ಸರ್ವಪಾಪಗಳನ್ನೂ ಬಿಟ್ಟು ಎದ್ದಿರುತ್ತಾನೆ' (ಛಾಂ. ೧-೬-೭) ಎಂದು ಯಾವ ಉಪಾಧಿಯೂ ಇಲ್ಲದೆ

1. ಉಪನಿಷತ್ತಿನಲ್ಲಿ ಎರಡು ವಾಕ್ಯಗಳಿವೆ : 'ಆ (ಆದಿತ್ಯಮಂಡಲ)ಕ್ಕಿಂತ ಆಚಿನ ಲೋಕಗಳುಂಟಷ್ಟೆ, ಅವುಗಳನ್ನೂ ದೇವಕಾಮಗಳನ್ನೂ ಆಳುತ್ತಾನೆ' (೧-೬-೮) ಎಂದು ಆದಿತ್ಯಪುರುಷನ ವಿಷಯದಲ್ಲಿ; 'ಇದಕ್ಕಿಂತ ಈಚೆಗೆ ಇರುವ ಲೋಕಗಳಿವೆಯಷ್ಟೆ, ಅವುಗಳನ್ನೂ ಮನುಷ್ಯಕಾಮಗಳನ್ನೂ ಆಳುತ್ತಾನೆ' (೧-೭-೬). ಎಂದು ಅಕ್ಷಿಪುರುಷನ ವಿಷಯದಲ್ಲಿ. ಈ ಇಬ್ಬರು ಪುರುಷರೂ ಒಬ್ಬನೇ ಎಂದಿಟ್ಟುಕೊಂಡು ಇಲ್ಲಿ ಸರ್ವಲೋಕಗಳಿಗೂ ಸರ್ವಕಾಮಗಳಿಗೂ ಈಶನು - ಎಂದು ಒಟ್ಟರ್ಥವನ್ನು ಬರೆದಿದೆ. ಶ್ರುತಿಯು ವಾಕ್ಯವನ್ನೇ ನೇರಾಗಿ ಉದಾಹರಿಸಿಲ್ಲ.

ಸರ್ವಲೋಕಗಳಿಗೂ (ಸರ್ವ)ಕಾಮಗಳಿಗೂ ಈಶನಾಗಿರುವದೂ, ಸ್ವಂತವಾಗಿಯೇ[1] ಕರ್ಮವಶ್ಯನಾಗದೆ ಇರುವದೆಂಬುದೂ ಪ್ರತ್ಯಗಾತ್ಮನಿಗಿಂತ **ಬೇರೆಯ ವಸ್ತು** ವಾಗಿರುವ ಪರಮಪುರುಷನಿಗೇ ಧರ್ಮವಷ್ಟೆ ?

'ನಾನು ಆದಿತ್ಯವರ್ಣನೂ ತಮಸ್ಸಿಗೆ ಆಚೆ ಇರುವವನೂ ಆದ ಈ ಮಹಾ ಪುರುಷನನ್ನು ಬಲ್ಲೆನು' (ತೈ. ಆ. ೩-೧೩-೩೯) ಮುಂತಾದ (ವಾಕ್ಯ)ಗಳಲ್ಲಿ ತ್ರಿಗುಣಾತ್ಮಕವಾದ ಪ್ರಕೃತಿಯೊಳಗೆ ಅಡಕವಾಗದಿರುವ **ಅಪ್ರಾಕೃತವಾದ[2] ತನಗೇ ಮೀಸಲಾಗಿರುವ ರೂಪವುಳ್ಳವನೆಂಬುದನ್ನು** ಜ್ಞಾನಾದಿಗುಣ ಗಳಂತೆಯೇ ಅವನಿಗೇ ಶ್ರುತಿಯಲ್ಲಿ ಹೇಳಿರುತ್ತದೆಯಷ್ಟೆ?[3] **ಜ್ಞಾನಾದಿಗಳೂ ಅವನ ಗುಣಗಳೇ[4] ಎಂಬುದು** 'ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು' (ತೈ. ೨-೧), 'ಯಾವನು ಸರ್ವಜ್ಞನೋ ಸರ್ವವಿದನೋ' (ಮುಂ. ೧-೧-೯), 'ಇವನ ಸ್ವಾಭಾವಿಕವಾದ ಪರಶಕ್ತಿಯು ವಿವಿಧವಾಗಿಯೇ ಇದೆ ಯೆಂದು ಕೇಳಬರುತ್ತಿದೆ; (ಸ್ವಾಭಾವಿಕವಾದ) ಜ್ಞಾನ, ಬಲ, ಕ್ರಿಯೆ -ಇವು ಗಳೂ (ಕೇಳಬರುತ್ತಿವೆ)' (ಶ್ವೇ. ೬-೮)- ಎಂಬಿವೇ ಮುಂತಾದ ವಾಕ್ಯಗಳಲ್ಲಿ ಶ್ರುತಿಯಲ್ಲಿ ಹೇಳಿರುವದರಿಂದ ನಿಶ್ಚಯವಾಗುತ್ತದೆ. ಹೀಗೆಯೇ 'ಆದಿತ್ಯವರ್ಣನೂ ತಮಸ್ಸಿಗೆ ಆಚೆ ಇರುವವನೂ' (ತೈ. ಆ. ೩-೧೨) ಮುಂತಾದ (ವಾಕ್ಯ)ಗಳಲ್ಲಿ ಅಪ್ರಾಕೃತವಾದ ಅಸಾಧಾರಣವಾದ ರೂಪವನ್ನು ಶ್ರುತಿಯಲ್ಲಿ ಹೇಳಿರುವದರಿಂದ ಆ ರೂಪವುಳ್ಳವನೂ ಆಗಿರುವನೆಂದು ನಿಶ್ಚಯವಾಗುತ್ತದೆ.

(ಮೂಲ)

೨೨. ತದೇತದ್ **ವಾಕ್ಯಕಾರ**ಶ್ಚಾಽಽಹ । 'ಹಿರಣ್ಮಯಃ ಪುರುಷೋ ದೃಶ್ಯತ ಇತಿ ಪ್ರಾಜ್ಞಃ ಸರ್ವಾನ್ತರಃ ಸ್ಯಾತ್ । ಲೋಕಕಾಮೇಶೋಪದೇಶಾತ್ । ತಥೋದಯಾತ್ ಪಾಪ್ಮನಾಮ್' ಇತ್ಯುಕ್ತ್ವಾ ತದ್ರೂಪಸ್ಯ ಕಾರ್ಯತ್ವಂ ಮಾಯಾ ಮಯತ್ವಂ ವಾ ಇತಿ ವಿಚಾರ್ಯ ಸ್ಯಾದ್ರೂಪಂ ಕೃತಕಮನುಗ್ರಹಾರ್ಥಂ ತಚ್ಚೇತಸಾಮ್ । ಐಶ್ವರ್ಯಾತ್ ಇತಿ ನಿರಸನೀಯಂ ಮತಮ್ ಉಪನ್ಯಸ್ಯ 'ರೂಪಂ ವಾ ಅತೀನ್ದ್ರಿಯಮ್ । ಅನ್ತಃಕರಣಪ್ರತ್ಯಕ್ಷನಿರ್ದೇಶಾತ್' ಇತಿ

---

1. 'ಈಷ್ಟೇ' (ಆಳುತ್ತಾನೆ) ಎಂದಿರುವದರಿಂದ ಸ್ವತಂತ್ರನು, ಕರ್ಮವಶನಲ್ಲ -ಎಂದು ವ್ಯಕ್ತವಾಗುತ್ತದೆ ಎಂದು ಭಾವ.

2. ತಮವೆಂದರೆ ಪ್ರಕೃತಿ ; ಅದರಿಂದಾಚೆಗೆ ಇರುತ್ತಾನೆ ಎಂದದ್ದರಿಂದ ರೂಪವು ಅಪ್ರಾಕೃತವೆಂದಾಯಿತು.

3. ಜ್ಞಾನಾದಿಗಳು ಹೇಗೆ ಪರಮಾತ್ಮನಿಗೆ ಸ್ವಾಭಾವಿಕವೋ ಹಾಗೆಯೇ ರೂಪವೂ ಸ್ವಾಭಾವಿಕವೆಂದು ಶ್ರುತಿಯಲ್ಲಿ ಹೇಳಿದೆ.

4. ಜ್ಞಾನಾದಿಸ್ವರೂಪಮಾತ್ರನಲ್ಲ, ಜ್ಞಾನಾದಿಗಳು ಅವನಿಗೆ ಗುಣಗಳೂ ಆಗಿವೆ. ;

ವ್ಯಾಖ್ಯಾತಂ ಚ ದ್ರಮಿಡಾಚಾರ್ಯೈಃ 'ನ ವಾ ಮಾಯಾಮಾತ್ರಮ್ ಅಞ್ಜಸೈವ ವಿಶ್ವಸೃಜೋ ರೂಪಮ್ । ತತ್ತು ನ ಚಕ್ಷುಷಾ ಗ್ರಾಹ್ಯಮ್ । ಮನಸಾ ತ್ವಕಲುಷೇಣ ಸಾಧನಾನ್ತರವತಾ ಗೃಹ್ಯತೇ । ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ ಮನಸಾ ತು ವಿಶುದ್ಧೇನ – ಇತಿ ಶ್ರುತೇಃ । ನ ಹ್ಯರೂಪಾಯಾ ದೇವತಾಯಾ ರೂಪಮುಪದಿಶ್ಯತೇ । ಯಥಾಭೂತವಾದಿ ಹಿ ಶಾಸ್ತ್ರಮ್ । ಮಾಹಾರಜತಂ[1] ವಾಸಃ । 'ವೇದಾಹಮೇತಂ ಪುರುಷಂ ಮಹಾನ್ತಮಾದಿತ್ಯವರ್ಣಮ್ –ಇತಿ ಪ್ರಕರಣಾನ್ತರನಿರ್ದೇಶಾತ್' ಇತಿ । 'ಸಾಕ್ಷಿಣ'[2] ಇತಿ ಹಿರಣ್ಮಯ ಇತಿ ರೂಪಸಾಮಾನ್ಯಾತ್ ಚನ್ದ್ರಮುಖವತ್ – ಇತಿ ಚ ವಾಕ್ಯಮ್ । ತಚ್ಚ ವ್ಯಾಖ್ಯಾತಂ ತೈರೇವ 'ನ ಮಯಡತ್ರ ವಿಕಾರಮಾದಾಯ ಪ್ರಯುಜ್ಯತೇ । ಅನಾರಭ್ಯತ್ವಾದಾತ್ಮನಃ' ಇತ್ಯಾದಿನಾ ॥

(ಅರ್ಥ)

ಆ ಇದನ್ನು[3] ವಾಕ್ಯಕಾರನೂ ಹೇಳಿರುತ್ತಾನೆ : 'ಹಿರಣ್ಮಯನಾದ ಪುರುಷನು ಕಾಣಿಸುತ್ತಾನಲ್ಲ'– ಎಂದು (ಹೇಳಿರುವದು) ಸರ್ವಾಂತರನಾದ ಪ್ರಾಜ್ಞನೇ ಆಗಿರಬೇಕು ; ಏಕೆಂದರೆ ಲೋಕಗಳಿಗೂ ಕಾಮಗಳಿಗೂ ಈಶನೆಂದು ಹೇಳಿದೆ, ಮತ್ತು ಪಾಪಗಳನ್ನು ಬಿಟ್ಟು ಎದ್ದಿರುತ್ತಾನೆ'[4] ಎಂದು ಹೇಳಿ ಅವನ ರೂಪವು ಕಾರ್ಯವೊ,[5] ಮಾಯಾಮಯವೊ ? –ಎಂದು ವಿಚಾರವನ್ನು ತೆಗೆದು ಆತನಲ್ಲಿಯೇ ಚಿತ್ತವುಳ್ಳವರಿಗೆ ಅನುಗ್ರಹಮಾಡುವದಕ್ಕಾಗಿ ಮಾಡಿಕೊಂಡ ಕೃತಕ ರೂಪವಾಗಿರಬಹುದು. ಏಕೆಂದರೆ (ಅವನಿಗೆ) ಈಶ್ವರತ್ವವಿದೆ- ಎಂದು ತಿರಸ್ಕರಣೀಯ ಮತವನ್ನು ಮೊದಲು ಹೇಳಿ, 'ಅತೀಂದ್ರಿಯವಾದ (ಪರಮಾರ್ಥ)ರೂಪವೇ (ಇದೆಯೆನ್ನಬೇಕು), ಏಕೆಂದರೆ ಅಂತಃಕರಣಕ್ಕೆ ಪ್ರತ್ಯಕ್ಷವಾಗುವದೆಂದು ಹೇಳಿದೆ[6]' ಎಂದು (ವಾಕ್ಯಕಾರನು ಹೇಳಿರುತ್ತಾನೆ). ಇದನ್ನು ದ್ರಮಿಡಾಚಾರ್ಯರು

---

1. ಈ ಮಾತಿನ ಹಿಂದೆ "ಯಥಾ" ಎಂದಿರುವದು ಬೇಕಿಲ್ಲವೆಂದು ಬಿಟ್ಟಿದೆ.

2. 'ಸಾಕ್ಷಿಣಃ' ಎಂಬ ಶಬ್ದವು ಇಲ್ಲಿ ಹೇಗೆ ಅನ್ವಿತವಾಗಬೇಕೆಂಬುದು ಸಂದಿಗ್ಧವಾಗಿದೆ ; ಅನುವಾದದ ಟಿಪ್ಪಣಿಯನ್ನು ನೋಡಿ.

3. ಪರಮೇಶ್ವರನಿಗೆ ಅಸಾಧಾರಣವಾದ ರೂಪವೂ ಉಂಟೆಂಬುದನ್ನು.

4. ಇಲ್ಲಿ ಪಾಪ್ಮನಾಮ್ ಎಂದು ಷಷ್ಠೀವಿಭಕ್ತಿಯನ್ನು ಪ್ರಯೋಗಿಸಿರುವದರಿಂದ 'ಸರ್ವಪಾಪಗಳೂ ಅವನನ್ನು ಬಿಟ್ಟು ಮೇಲಕ್ಕೆದ್ದಿರುವವರಿಂದ' ಎಂದು ಕನ್ನಡಿಸುವದು ಯುಕ್ತವಾಗಿದೆ ; 'ಪಾಪ್ಮಭ್ಯಃ' ಎಂದಿದ್ದರೆ ನಾವು ಕೊಟ್ಟಿರುವ ಅನುವಾದವೇ ಸಾಕು.

5. ಪರಮಾರ್ಥವೊ – ಎಂದರ್ಥ ; ಕಾರ್ಯವೆಂದರೆ ಪರಮೇಶ್ವರನು ನಿಜವಾಗಿ ಮಾಡಿಕೊಂಡಿರುವದೊ ಎಂದು ಅಕ್ಷರಾರ್ಥಮಾಡಬೇಕಾಗುವದು.

6. ಪ್ರತ್ಯಕ್ಷವಾಗಿರುವದು ಸುಳ್ಳೆಂದು ಹೇಗೆ ? –ಎಂದು ಭಾವ.

ಹೀಗೆ ವ್ಯಾಖ್ಯಾನವನ್ನು ಮಾಡಿಯೂ ಇರುತ್ತಾರೆ. 'ಮಾಯಾಮಯವಲ್ಲವೇ ಅಲ್ಲ' ವಿಶ್ವಸೃಷ್ಟಿಕರ್ತನಾದ (ಪರಮಾತ್ಮನ ರೂಪವು) ಪರಮಾರ್ಥವೇ. ಆದರೆ ಅದು ಚಕ್ಷುಸ್ಸಿನಿಂದ ಗ್ರಹಿಸಬಹುದಾದದ್ದಲ್ಲ; ಮತ್ತೇನೆಂದರೆ ನಿಷ್ಕಲ್ಮಷವಾದ ಮನಸ್ಸಿನಿಂದ ಸಾಧನಾಂತರವುಳ್ಳಾತನು[1] ಗ್ರಹಿಸುವದಕ್ಕೆ ಆಗುತ್ತದೆ. ಏಕೆಂದರೆ ಚಕ್ಷುಸ್ಸಿನಿಂದ ಗ್ರಹಿಸುವದಕ್ಕಾಗುವದಿಲ್ಲ, ವಾಕ್ಕಿನಿಂದಲೂ ಆಗುವದಿಲ್ಲ, ವಿಶುದ್ಧವಾದ ಮನಸ್ಸಿನಿಂದಲಾದರೆ (ಕಾಣಬಹುದು) ಎಂದು ಶ್ರುತಿಯಿದೆ (ಮುಂ. ೩-೧-೮). ರೂಪವೇ ಇಲ್ಲದ ದೇವತೆಗೆ ರೂಪವನ್ನು ಹೇಳಿರುತ್ತದೆ ಎನ್ನುವದಕ್ಕಿಲ್ಲವಷ್ಟೆ ? ಶಾಸ್ತ್ರವು ಇದ್ದದ್ದನ್ನು ಇದ್ದಂತೆ ಹೇಳುವದಲ್ಲವೆ ? 'ಬೆಳ್ಳಿಯಂತೆ[2] ಹೊಳೆಯುವ ವಸ್ತ್ರವು' (ಬೃ. ೨-೩-೬), 'ಆದಿತ್ಯವರ್ಣನಾದ ಈ ಮಹಾಪುರುಷನನ್ನು ನಾನು ಬಲ್ಲೆನು' (ತೈ. ಆ. ೩-೧೨-೩೮) -ಎಂದು ಪ್ರಕರಣಾಂತರದಲ್ಲಿ ಹೇಳಿರುವದರಿಂದಲೂ (ಹೀಗೆ) ಸಾಕ್ಷಿಗೆ[3] (?) ಹಿರಣ್ಮಯನು ಎಂದಿರುವದು ಅದೇ ರೂಪದ ಹೋಲಿಕೆಯಿರುವದರಿಂದ, ಚಂದ್ರಮುಖ ಎಂಬಂತೆಯೇ[4] ಇದು ?' -ಎಂದೂ **ವಾಕ್ಯ**(**ಕಾರರ** ವಚನವಿದೆ). ಅದನ್ನು ಆ (**ದ್ರಮಿಡಾಚಾರ್ಯ**)ರೇ 'ಇಲ್ಲಿ ಮಯಟ್ಪ್ರತ್ಯಯವನ್ನು ವಿಕಾರವೆಂಬರ್ಥವನ್ನಿಟ್ಟುಕೊಂಡು ಪ್ರಯೋಗಿಸಿರುವದಿಲ್ಲ : ಏಕೆಂದರೆ ಆತ್ಮನು (ಏತಕ್ಕೂ) ಕಾರ್ಯವಾಗಿರುವವನಲ್ಲ' ಎಂದು ಮುಂತಾದ (ವಾಕ್ಯ)ದಿಂದ ವಿವರಿಸಿರುತ್ತಾರೆ.

---

1. ಯೋಗಾಭ್ಯಾಸಯುಕ್ತನಾದವನು.

2. 'ಮಾಹಾರಜನಂ' ಎಂಬ ಪಾಠವು ಶಂಕರಭಾಷ್ಯಸಂಮತವಾಗಿದೆ ; ಅದಕ್ಕೆ ಅರಶಿನ ಬಣ್ಣದ ಎಂದರ್ಥ.

3. 'ಸಾಕ್ಷಿಣಃ' ಎಂಬುದರ ಕನ್ನಡವಿದು. ಮೂಲದಲ್ಲಿ ಏನೋ ಹೆಚ್ಚುಕಡಿಮೆಯಾಗಿರುವಂತೆ ಇದೆ. ವೇದಾರ್ಥಸಂಗ್ರಹದಲ್ಲಿ 'ಸರ್ವೇಶಾಚ್ಚ ಸಾಕ್ಷಿಣಃ ಇತ್ಯಾದಿನಾ' ಎಂದಿದೆ. ಆಗ ಆದಿತ್ಯನಲ್ಲಿರುವ ಕರ್ಮಸಾಕ್ಷಿಯಾದ ಪರಮಪುರುಷನಿಗೆ (ರೂಪವನ್ನು) ಹೇಳಿರುವದರಿಂದ ಎಂದು ಅರ್ಥವನ್ನು ಮಾಡಬೇಕಾಗುವದು. ಇಲ್ಲಿ ಇತಿ ಆದಮೇಲೆ 'ಸಾಕ್ಷಿಣ ಇತಿ' ಎಂದಿದೆ. ಈ ವಾಕ್ಯವು ಇಷ್ಟಕ್ಕೇ ಪೂರ್ತಿಯಾದರೆ ಯಾವ ಅಭಿಪ್ರಾಯವೂ ಹೊರಡುವದಿಲ್ಲ. ಈ ಮಾತೇ ಇಲ್ಲದಿದ್ದರೂ ಆಗುತ್ತಿತ್ತೆಂದು ತೋರುತ್ತದೆ.

4. ಚಂದ್ರಮುಖವೆಂದರೆ ಚಂದ್ರನಂತೆ ಹೊಳೆಯುವ ಮುಖ ಎಂದರ್ಥ. ಹಾಗೆ ಇಲ್ಲಿಯೂ ಚಿನ್ನದಂತೆ ಹೊಳೆಯುವ ಎಂದರ್ಥ - ಎಂದು ವಾಕ್ಯಕಾರರ ಅಭಿಪ್ರಾಯವೆಂದು ಕಾಣುತ್ತದೆ. ಆದರೆ ಹಿರಣ್ಮಯಶಬ್ದಕ್ಕೆ ಮುಖ್ಯಾರ್ಥವನ್ನು ತೆಗೆದುಕೊಳ್ಳಬಾರದು ಎಂಬುದು ವಾಕ್ಯಕಾರರ ಅಭಿಪ್ರಾಯವು ; ಆದ್ದರಿಂದ ನೀಲಮೇಘವರ್ಣನೆಂದು ಬೇರೆ ಕಡೆಯಲ್ಲಿ ವರ್ಣಿಸಿರುವದಕ್ಕೆ ವಿರೋಧವಿಲ್ಲ - ಎಂದು **ರಂಗರಾಮಾನುಜರು** ಬರೆದಿರುತ್ತಾರೆ. ರುಕ್ಮವರ್ಣನೆಂದು ಶ್ರುತಿಯಿರುವದರಿಂದ ನೀಲತೋಯದ ಕಾಂತಿಗೆ ರುಕ್ಮವರ್ಣತ್ವವೂ ಹೊಂದುತ್ತದೆ ; ಇದು ಸಂಪ್ರದಾಯಗಮ್ಯವು ಎಂದೂ ಬರೆದಿರುತ್ತಾರೆ.

(ಮೂಲ)

೨೩. ಅತಃ ಪ್ರಧಾನಾತ್ ಪ್ರತ್ಯಗಾತ್ಮನಶ್ಚ ಅರ್ಥಾನ್ತರಭೂತೋ ನಿರುಪಾಧಿಕವಿಪಶ್ಚಿತ್ । ಅನವಧಿಕಾತಿಶಯಾನನ್ದಃ, ಅಪ್ರಾಕೃತಸ್ವಾಸಾಧಾರಣ ದಿವ್ಯರೂಪಃ ಪುರುಷೋತ್ತಮಃ ಪರಂ ಬ್ರಹ್ಮ ಜಗತ್ಕಾರಣಮ್ ಇತಿ ವೇದಾನ್ತೈಃ ಪ್ರತಿಪಾದ್ಯತ ಇತಿ ನಿರವದ್ಯಮ್ ॥

(ಅರ್ಥ)

ಆದ್ದರಿಂದ ಪ್ರಧಾನಕ್ಕಿಂತಲೂ ಪ್ರತ್ಯಗಾತ್ಮನಿಗಿಂತಲೂ ಬೇರೆಯಾಗಿರುವವನಾಗಿ, ಯಾವ ಉಪಾಧಿಯೂ ಇಲ್ಲದ ವಿಪಶ್ಚಿತನಾಗಿ[1] ಮಿಗಿಲಿಲ್ಲದಷ್ಟು ಅತಿಶಯವಾದ ಆನಂದವುಳ್ಳವನಾಗಿ, ಅಪ್ರಾಕೃತವಾದ ತನಗೇ ಮೀಸಲಾಗಿರುವ ದಿವ್ಯರೂಪವುಳ್ಳವನಾಗಿರುವ ಪುರುಷೋತ್ತಮನೆಂಬ ಪರಬ್ರಹ್ಮವೇ ಜಗತ್ಕಾರಣವು ಎಂದು ಎಲ್ಲಾ ಉಪನಿಷತ್ತುಗಳಲ್ಲಿಯೂ ಪ್ರತಿಪಾದಿತವಾಗಿರುತ್ತದೆ ಎಂಬುದು ನಿರ್ದುಷ್ಟವು.

## ೨೨. ಭೇದವ್ಯಪದೇಶಾಚ್ಚಾನ್ಯಃ (೧-೧-೨೨)

(ಮೂಲ)

೨೪. 'ಯ ಆದಿತ್ಯೇ ತಿಷ್ಠನ್ನಾದಿತ್ಯಾದನ್ತರೋ ಯಮಾದಿತ್ಯೋ ನ ವೇದ ಯಸ್ಯಾದಿತ್ಯಃ ಶರೀರಂ ಯ ಆದಿತ್ಯಮನ್ತರೋ ಯಮಯತಿ ಸ ತ ಆತ್ಮಾನ್ತರ್ಯಾಮ್ಯಮೃತಃ.....ಇತ್ಯಧಿದೈವತಮ್'[2] (ಬೃ. ಮಾ. ೩-೭-೧೩.....೧೬), 'ಯಶ್ಚಕ್ಷುಷಿ ತಿಷ್ಠನ್' (ಯ ಆತ್ಮನಿ ತಿಷ್ಠನ್)[3] ಇತ್ಯಧ್ಯಾತ್ಮಮ್[4] '(ಬೃ.ಮಾ. ೩-೭-೨೩, .....೩೦), 'ಯಃ ಸರ್ವೇಷು ಲೋಕೇಷು ತಿಷ್ಠನ್ ....ಇತ್ಯಧಿಲೋಕಮ್[5]' (ಬೃ.ಮಾ. ೩-೭-೧೭), 'ಯಃ ಸರ್ವೇಷು ಭೂತೇಷು ತಿಷ್ಠನ್.... ಇತ್ಯಧಿಭೂತಮ್[6]' (ಬೃ.ಮಾ. ೩-೭-೨೦), 'ಯಃ ಸರ್ವೇಷು ವೇದೇಷು ತಿಷ್ಠನ್

---

1. ಜೀವನು ಮುಕ್ತನಾದಾಗ ಸರ್ವಜ್ಞನಾಗಿರುತ್ತಾನೆ, ಆದರೆ ಜಗತ್ಸೃಷ್ಟ್ಯಾದಿಗಳನ್ನು ಮಾಡುವದನ್ನು ಬಲ್ಲವನಾಗಿರುವದಿಲ್ಲ; ಆದ್ದರಿಂದ ಅವನ ವಿಪಶ್ಚಿತ್ತ್ವವು ಸೋಪಾಧಿಕ; ಪರಮಾತ್ಮನ ವಿಪಶ್ಚಿತ್ತ್ವಕ್ಕೆ ಯಾವ ಮಿತಿಯೂ ಇಲ್ಲದ್ದರಿಂದ ಅದು ನಿರುಪಾಧಿಕ.

2. 'ಇತ್ಯಧಿದೇವತಮ್' ಎಂದು ಮಾ॥ ಪಾಠ; ಹೀಗೆಯೇ ಮುಂದೆಯೂ ಪಾಠಾಂತರಗಳನ್ನು ತಿಳಿಯಬೇಕು.

3. ಇದು ತೆ॥ ಪಾಠದಲ್ಲಿ ಮಾತ್ರ ಕಂಸದೊಳಗೆ ಇದೆ.

4. ಈ ಮಾತು ಉಪನಿಷತ್ತಿನ ಮೂಲದಲ್ಲಿಲ್ಲ.

5. 'ಇತ್ಯು ಏವಾಧಿಲೋಕಮ್' (೧೭). 6. 'ಇತ್ಯು ಏವಾಧಿಭೂತಮ್' (೨೨)

ಇತ್ಯಧಿವೇದಮ್।' (ಬೃ. ಮಾ. ೩-೭-೧೮), 'ಯಃ ಸರ್ವೇಷು ಯಜ್ಞೇಷು ತಿಷ್ಠನ್ನಿತ್ಯಧಿಯಜ್ಞಮ್'[2] (ಬೃ.ಮಾ.೩-೭-೧೯)- ಇತ್ಯನ್ತರ್ಯಾಮಿಬ್ರಾಹ್ಮಣೇ। ಸುಬಾಲೋಪನಿಷದಿ ಚ 'ಯಃ ಪೃಥಿವೀಮನ್ತರೇ ಸಞ್ಚರನ್' ಇತ್ಯಾರಭ್ಯ ಯೋಽವ್ಯಕ್ತಮನ್ತರೇ ಸಞ್ಚರನ್....ಯೋಽಕ್ಷರಮನ್ತರೇ ಸಞ್ಚರನ್.... ಯೋ ಮೃತ್ಯುಮನ್ತರೇ ಸಞ್ಚರನ್ ಯಸ್ಯ ಮೃತ್ಯುಃ ಶರೀರಂ[3] ಯಂ ಮೃತ್ಯುರ್ನ ವೇದ ಏಷ[4] ಸರ್ವಭೂತಾನ್ತರಾತ್ಮಾಽಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ' (ಸು. ೭) ಇತಿ ಸರ್ವದೇವಸರ್ವಲೋಕಸರ್ವಭೂತಸರ್ವವೇದಸರ್ವಯಜ್ಞಸರ್ವಾತ್ಮೋಪರಿವರ್ತಮಾನತಯಾ ತತ್ತಚ್ಛರೀರತಯಾ ತತ್ತದನ್ತರಾತ್ಮತಯಾ ತತ್ತದವೇದ್ಯತಯಾ ತತ್ತನ್ನಿಯನ್ತೃತಯಾ ಚ ಏಭ್ಯಃ ಸರ್ವೇಭ್ಯೋ ಭೇದವ್ಯಪದೇಶಾಚ್ಚ ಅಯಮಪಹತಪಾಪ್ಮಾ ನಾರಾಯಣಃ ಪ್ರಧಾನಾತ್ ಪ್ರತ್ಯಗಾತ್ಮನಶ್ಚ ಅರ್ಥಾನ್ತರಭೂತೋ ನಿಖಿಲಜಗದೇಕಕಾರಣಮಿತಿ ಸಿದ್ಧಮ್ ॥ ೨೨ ॥

(ಅರ್ಥ)

'ಯಾವನು ಆದಿತ್ಯನಲ್ಲಿರುವವನಾಗಿ ಆದಿತ್ಯನಿಗಿಂತಲೂ ಒಳಗೆ ಇರುವನೋ ಯಾವನನ್ನು ಆದಿತ್ಯನು ಅರಿಯನೋ ಯಾವನಿಗೆ ಆದಿತ್ಯನು ಶರೀರವೋ ಯಾವನು ಆದಿತ್ಯನನ್ನು ಒಳಗಿದ್ದು ನಿಯಮಿಸುತ್ತಿರುವನೋ ಅವನು ನಿನ್ನ ಆತ್ಮನು, ಅಮೃತನಾದ ಅಂತರ್ಯಾಮಿಯು .... ಇಂತು **ಅಧಿದೈವತವು**' (ಬೃ. ೩-೭-೧೨ ...೧೬), 'ಯಾವನು ಚಕ್ಷುಸ್ಸಿನಲ್ಲಿ ಇರುವವನಾಗಿ....(ಯಾವನು ಆತ್ಮನಲ್ಲಿರುವವನಾಗಿ) ಇಂತು ಅಧ್ಯಾತ್ಮವು' (ಬೃ.೩-೭-೨೩ .... ೩೦), 'ಯಾವನು ಎಲ್ಲಾ ಲೋಕಗಳಲ್ಲಿಯೂ ಇರುವವನಾಗಿ......ಇಂತು ಅಧಿಲೋಕವು' (ಬೃ. ಮಾ. ೩-೭-೧೭), 'ಯಾವನು ಎಲ್ಲಾ ಭೂತಗಳಲ್ಲಿಯೂ ಇರುವವನಾಗಿ..... ಇಂತು ಅಧಿಭೂತವು' (ಬೃ. ಮಾ. ೩-೭-೨೦), 'ಯಾವನು ಎಲ್ಲಾ ವೇದಗಳಲ್ಲಿಯೂ ಇರುವವನಾಗಿ- ಇಂತು ಅಧಿವೇದವು', (ಬೃ. ಮಾ. ೩-೭-೧೮) 'ಯಾವನು ಎಲ್ಲಾ

---

1. 'ಇತ್ಯು ಏವಾಧಿವೇದಮ್' (೧೮).

2. 'ಇತ್ಯು ಏವಾಧಿಯಜ್ಞಮ್' (೧೯).

3. ನಿರ್ಣಯಸಾಗರದಲ್ಲಿ ಅಚ್ಚಾಗಿರುವ ಸುಬಾಲೋಪನಿಷತ್ತಿನಲ್ಲಿ 'ಯಸ್ಯ ಮೃತ್ಯುಃ ಶರೀರಂ ಯೋ ಮೃತ್ಯುಮನ್ತರೇ ಸಂಚರನ್ ಯಂ ಮೃತ್ಯುರ್ನ ವೇದ' ಎಂಬೀ ಅನುಕ್ರಮವಿದೆ. ಆದರೆ ಶ್ರೀಭಾಷ್ಯದಲ್ಲಿಯೂ ವೇದಾರ್ಥಸಂಗ್ರಹದಲ್ಲಿಯೂ ವೇದಾಂತಸಾರದಂತೆಯೇ 'ಯೋ ಮೃತ್ಯುಮನ್ತರೇ ಸಂಚರನ್' ಎಂದೇ ಮೊದಲು ಇರುತ್ತದೆ.

4. 'ಸ ಏಷ' ಎಂದು ನಿ॥ ಮುದ್ರಿತಪಾಠ; ಶ್ರೀಭಾಷ್ಯದಲ್ಲಿಯೂ 'ಸ' ಇಲ್ಲದ ಪಾಠವೇ ಇದೆ.

ಯಜ್ಞಗಳಲ್ಲಿಯೂ ಇರುವವನಾಗಿ ......ಇಂತು ಅಧಿಯಜ್ಞವು' (ಬೃ.ಮಾ. ೩-೭-೧೯)[1]-ಎಂದು **ಅಂತರ್ಯಾಮಿಬ್ರಾಹ್ಮಣದಲ್ಲಿದೆ.** ಮತ್ತು **ಸುಬಾಲೋಪನಿಷತ್ತಿನಲ್ಲಿ** 'ಯಾವನು ಪೃಥಿವಿಯೊಳಗೆ ಸಂಚರಿಸುತ್ತಿರುವವನಾಗಿ ಎಂದು ಆರಂಭಿಸಿ 'ಯಾವನು ಅವ್ಯಕ್ತದೊಳಗೆ ಸಂಚರಿಸುತ್ತಿರುವವನಾಗಿ..... ಯಾವನು ಅಕ್ಷರದೊಳಗೆ ಸಂಚರಿಸುತ್ತಿರುವವನಾಗಿ[2] .....ಯಾವನು ಮೃತ್ಯುವಿನೊಳಗೆ ಸಂಚರಿಸುತ್ತಿರುವವನಾಗಿ ಯಾವನಿಗೆ ಮೃತ್ಯುವು ಶರೀರವೋ, ಯಾವನನ್ನು ಮೃತ್ಯುವು ಅರಿಯದೋ (ಅ) ಇವನು ಸರ್ವಭೂತಗಳಿಗೂ ಅಂತರಾತ್ಮನು, ಅಪಹತಪಾಪ್ಮನು, ದಿವ್ಯನಾದ ಏಕದೇವನು. ನಾರಾಯಣನು' (ಸು. ೭) ಎಂದು **ಸರ್ವದೇವತೆಗಳ, ಸರ್ವಲೋಕಗಳ, ಸರ್ವಭೂತಗಳ, ಸರ್ವವೇದಗಳ, ರ್ವಯಜ್ಞಗಳ. ಸರ್ವಆತ್ಮರುಗಳ ಮೇಲೆ ಇರುವದರಿಂದಲೂ ಅವರವರನ್ನು ಶರೀರವಾಗಿ ಉಳ್ಳವನಾಗಿರುವದರಿಂದಲೂ ಅವರವರಿಗೆ ಒಳಗಿನ ಆತ್ಮನಾಗಿರುವದರಿಂದಲೂ ಅವರವರಿಗೆ ಅರಿಯುವದಕ್ಕಾಗದೆ ಇರುವದರಿಂದಲೂ, ಅವರವರನ್ನು ನಿಯಮಿಸುವವನಾಗಿರುವದರಿಂದಲೂ ಈ ಎಲ್ಲರಿಗಿಂತಲೂ ಬೇರೆಯೆಂದು** ಹೇಳಿರುವದರಿಂದಲೂ ಈ ಅಪಹತಪಾಪ್ಮನಾದ ನಾರಾಯಣನು ಪ್ರಧಾನಕ್ಕಿಂತಲೂ ಪ್ರತ್ಯಗಾತ್ಮನಿಗಿಂತಲೂ ಬೇರೆಯಾಗಿರುವ ಸಮಸ್ತಜಗತ್ತಿಗೂ ಏಕಕಾರಣನು ಎಂದು ಸಿದ್ಧವಾಯಿತು. ‖ ೨೨ ‖

## ಆಕಾಶಪ್ರಾಣಾಧಿಕರಣಗಳು

### ೨೩. ಆಕಾಶಸ್ತಲ್ಲಿಙ್ಗಾತ್ (೧-೧-೨೩)

### ೨೪. ಅತ ಏವ ಪ್ರಾಣಃ (೧-೧-೨೪)

(ಮೂಲ)

೨೫. 'ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯನ್ತೇ ಆಕಾಶಂ ಪ್ರತ್ಯಸ್ತಂ ಯನ್ತಿ' (ಛಾಂ. ೧-೯-೧). 'ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶನ್ತಿ ಪ್ರಾಣಮೇವಾಭ್ಯುಜ್ಜಿಹತೇ'

---

1. ಮಾಧ್ಯಂದಿನಶಾಖದ ಬೃಹದಾರಣ್ಯಕದಲ್ಲಿ ಅಧಿದೈವತ, ಅಧಿಲೋಕ, ಅಧಿವೇದ, ಅಧಿಯಜ್ಞ, ಅಧಿಭೂತ, ಅಧ್ಯಾತ್ಮ- ಈ ಕ್ರಮವಲ್ಲಿ ಅಂತರ್ಯಾಮಿಯನ್ನು ವರ್ಣಿಸಿದೆ. ಆದರೆ ಇಲ್ಲಿ ಅಧಿದೈವತ, ಅಧ್ಯಾತ್ಮ- ಇವುಗಳಾದಮೇಲೆಯೇ ಅಧಿಲೋಕ, ಅಧಿಭೂತ, ಅಧಿವೇದ, ಅಧಿಯಜ್ಞಗಳನ್ನು ತಿಳಿಸಿದೆ. ಈ ಅನುಕ್ರಮಭೇದಕ್ಕೆ ಕಾರಣವು ತಿಳಿಯಲಿಲ್ಲ, ಅಧಿದೈವತದಲ್ಲಿ ಆದಿತ್ಯನಿಂದ ಪ್ರಾರಂಭಿಸಿರುವದು ಆದಿತ್ಯಾಂತರ್ಗತಪುರುಷನೇ ಪ್ರಕೃತವಾಗಿರುವದರಿಂದ ಇರಬಹುದು.

2. ನಿರ್ಣಯಸಾಗರದಲ್ಲಿ ಅಚ್ಚಾಗಿರುವ ಪುಸ್ತಕದಲ್ಲಿ ಅಕ್ಷರವಾದಮೇಲೆ ಅವ್ಯಕ್ತಪರ್ಯಾಯವು ಬಂದಿದೆ; ಇಲ್ಲಿ ಅದು ಬೇರೆಯ ಕ್ರಮದಲ್ಲಿದೆ. ಏಕೆಂಬುದು ತಿಳಿಯದು.

(ಛಾಂ. ೧-೧೧-೫) ಇತ್ಯಾದೌ 'ಸದೇವ ಸೋಮ್ಯೇದಮಗ್ರ ಆಸೀತ್' (ಛಾಂ. ೬-೨-೧) ಇತ್ಯಾದಿನಾ ಸಾಮಾನ್ಯೇನ ನಿರ್ದಿಷ್ಟಸ್ಯ ಜಗತ್ಕಾರಣಸ್ಯ ಭೂತಾಕಾಶಪ್ರಾಣಸಹಚಾರಿಜೀವವಾಚಿಶಬ್ದಾಭ್ಯಾಂ ವಿಶೇಷನಿರ್ಣಯ ಶಙ್ಕಾಯಾಂ 'ಸರ್ವಾಣಿ ಹ ವಾ ಇಮಾನಿ ಭೂತಾನಿ' (ಛಾಂ. ೧-೯-೧, ೧-೧೧-೫) ಇತಿ ಪ್ರಸಿದ್ಧವತ್ ನಿರ್ದಿಶ್ಯಮಾನಾತ್ ಜಗತ್ಕಾರಣತ್ವಾದಿಲಿಙ್ಗಾತ್ ಭೂತಾಕಾಶಜೀವಾಭ್ಯಾಮ್ ಅರ್ಥಾನ್ತರಭೂತಃ ಪರಮಪುರುಷ ಏವಾತ್ರ ಆಕಾಶ ಪ್ರಾಣಶಬ್ದನಿರ್ದಿಷ್ಟ ಇತಿ ನಿಶ್ಚೀಯತೇ ॥

(ಅರ್ಥ)

**೨೩. ಆಕಾಶವು (ಬ್ರಹ್ಮವೇ); ಏಕೆಂದರೆ ಆ (ಬ್ರಹ್ಮದ) ಲಿಂಗವಿದೆ.**

**೨೪. ಆದ್ದರಿಂದಲೇ ಪ್ರಾಣವು (ಬ್ರಹ್ಮವೇ).**

'ಈ ಎಲ್ಲಾ ಭೂತಗಳೂ ಆಕಾಶದಿಂದಲೇ ಉಂಟಾಗಿರುತ್ತವೆ, ಆಕಾಶ ದಲ್ಲಿಯೇ ಮುಳುಗುತ್ತವೆ' (ಛಾಂ. ೧-೯-೧), 'ಈ ಎಲ್ಲಾ ಭೂತಗಳೂ ಪ್ರಾಣ ನನ್ನೇ ಒಳಹೊಗುತ್ತವೆ, ಪ್ರಾಣನನ್ನೇ ಬಿಟ್ಟು ಹೊರಬೀಳುತ್ತವೆ' (ಛಾಂ. ೧-೧೧-೫) ಎಂದು ಮುಂತಾಗಿರುವ (ವಾಕ್ಯಗಳ)ಲ್ಲಿ 'ಅಪ್ಪ, ಇದು ಮೊದಲು ಸತ್ತೇ ಆಗಿತ್ತು' (ಛಾಂ. ೬-೨-೧) ಎಂದು ಮುಂತಾದ (ವಾಕ್ಯ)ದಿಂದ ಸಾಮಾನ್ಯ (ಶಬ್ದ)ದಿಂದ[1] ತಿಳಿಸಿದ್ದ ಜಗತ್ಕಾರಣವನ್ನು ಭೂತಾಕಾಶ(ಶಬ್ದ), ಪ್ರಾಣಸಹ ಚಾರಿಯಾದ ಜೀವವಾಚಕ(ವಾದ ಪ್ರಾಣಶಬ್ದ)- ಇವುಗಳಿಂದ ವಿಶೇಷವಾಗಿ ನಿರ್ಣಯಿಸಿರುತ್ತದೆ ಎಂಬ ಶಂಕೆಯುಂಟಾಗಲಾಗಿ—'ಈ ಎಲ್ಲಾ ಭೂತಗಳೂ' (ಛಾಂ. ೧-೯-೧೧, ೧-೧೧-೫) ಎಂದು ಪ್ರಸಿದ್ಧವಾಗಿರುವಂತೆಯೇ ನಿರ್ದೇಶಿಸಿ (ಹೇಳಿರುವ) ಜಗತ್ಕಾರಣತ್ವವೇ ಮುಂತಾದ ಲಿಂಗವಿರುವದರಿಂದ[2] ಭೂತಾಕಾಶ ಜೀವರುಗಳಿಗಿಂತ ಬೇರೆಯ ವಸ್ತುವಾಗಿರುವ ಪರಮಪುರುಷನನ್ನೇ ಇಲ್ಲಿ ಆಕಾಶ ಪ್ರಾಣಶಬ್ದಗಳಿಂದ ಹೇಳಿರುತ್ತದೆ ಎಂದು ನಿಶ್ಚಯವಾಗುತ್ತದೆ.

(ಮೂಲ)

೨೬. ತತ್ಪ್ರಸಿದ್ಧಿಸ್ತು ಬಹುಭವನರೂಪೇಕ್ಷಣಾನವಧಿಕಾತಿಶಯಾನನ್ದ ಜೀವಾನನ್ದಹೇತುತ್ವವಿಜ್ಞಾನಮಯವಿಲಕ್ಷಣತ್ವನಿಖಿಲಭುವನಭಯಾಭಯಹೇತು ತ್ವಸರ್ವಲೋಕಸರ್ವಕಾಮೇಶತ್ವಸರ್ವಪಾಪ್ಮೋದಯಾಪ್ರಾಕೃತಸ್ವಾಸಾಧಾರಣ

1. ಸತ್ತು ಎಂಬುದು ಬ್ರಹ್ಮ, ಪ್ರಧಾನ, ಜೀವ- ಎಲ್ಲಕ್ಕೂ ಸಾಧಾರಣವಾಗಿರುತ್ತದೆ.
2. ಲಿಂಗವೆಂದರೆ ಗುರುತು, ಶಬ್ದಸಾಮರ್ಥ್ಯದಿಂದ ಊಹಿಸಿಕೊಳ್ಳಬಹುದಾದದ್ದು; ಈ ಜಗತ್ಕಾರಣತ್ವವೇ ಮುಂತಾದವನ್ನು ಮುಂದಿನ ಪ್ರಘಟ್ಟದಲ್ಲಿ ತಿಳಿಸಿದೆ.

ರೂಪವಿಶಿಷ್ಟಸ್ಯ ರವಿಕರವಿಕಸಿತಪುಣ್ಡರೀಕನಯನಸ್ಯ ಸರ್ವಜ್ಞಸ್ಯ ಸತ್ಯಸಙ್ಕಲ್ಪಸ್ಯ ಕರಣಾಧಿಪಾಧಿಪಸ್ಯ ಪರಮಪುರುಷಸ್ಯೈವ ನಿಖಿಲಜಗದೇಕಕಾರಣತ್ವಾದಿತಿ ಸ ಏವ ಆಕಾಶಪ್ರಾಣಶಬ್ದಾಭ್ಯಾಂ ಜಗತ್ಕಾರಣತ್ವೇನಾಭಿಧೀಯತ ಇತಿ ನಿರ್ಣಯೋ ಯುಕ್ತ ಏವ ॥ ೨೪ ॥

(ಅರ್ಥ)

ಆ (ಬ್ರಹ್ಮದ) ಪ್ರಸಿದ್ಧಿಯು ಹೇಗೆಂದರೆ, ಬಹುವಾಗುವೆನು ಎಂದು ಯೋಚಿಸಿನೋಡುವದು[1], ಮಿಗಿಲಿಲ್ಲದಷ್ಟು ಅತಿಶಯವಾದ ಆನಂದವುಳ್ಳದ್ದಾಗಿರುವದು, ಜೀವನ ಆನಂದಕ್ಕೆ ಕಾರಣವಾಗಿರುವದು, ವಿಜ್ಞಾನಮಯನಿಗಿಂತ ವಿಲಕ್ಷಣನಾಗಿರುವದು, ಎಲ್ಲಾ ಭುವನಗಳಿಗೂ ಭಯಾಭಯಗಳಿಗೆ ಕಾರಣವಾಗಿರುವದು[2], ಸರ್ವಲೋಕಸರ್ವಕಾಮಗಳಿಗೂ ಈಶನಾಗಿರುವದು, ಸರ್ವಪಾಪಗಳನ್ನೂ ಬಿಟ್ಟಿರುವದು[3], ಅಪ್ರಾಕೃತವಾದ ಅಸಾಧಾರಣವಾದ ರೂಪದಿಂದೊಡಗೂಡಿರುವದು[4]– ಇವುಗಳನ್ನುಳ್ಳ, ಸೂರ್ಯಕಿರಣಗಳಿಂದ ಅರಳುವ ಪುಂಡರೀಕನಯನನಾಗಿರುವ, ಸರ್ವಜ್ಞನೂ ಸತ್ಯಸಂಕಲ್ಪನೂ[5] ಕರಣಾಧಿಪತಿಗಳಿಗೆ ಅಧಿಪತಿಯೂ[6] ಆಗಿರುವ ಪರಮಪುರುಷನಿಗೆ ಮಾತ್ರವೇ (ಇದೆ), ಏಕೆಂದರೆ ಅವನು ಜಗತ್ತಿಗೆಲ್ಲ ಕಾರಣನಾಗಿರುತ್ತಾನೆ; ಆದ್ದರಿಂದ ಅವನನ್ನೇ ಆಕಾಶಪ್ರಾಣಶಬ್ದಗಳಿಂದ ಜಗತ್ಕಾರಣನೆಂದು (ಈ ಶ್ರುತಿವಾಕ್ಯ)ಗಳಲ್ಲಿ ಹೇಳಿವೆ ಎಂಬ ನಿರ್ಣಯವು ಯುಕ್ತವೇ. ॥ ೨೪ ॥

## ಜ್ಯೋತಿರಧಿಕರಣ

### ೨೫. ಜ್ಯೋತಿಶ್ಚರಣಾಭಿಧಾನಾತ್ (೧-೧-೨೫)

(ಮೂಲ)

೨೭. 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತದ್ಯದಿದಮಸ್ಮಿನ್ನನ್ತಃ ಪುರುಷೇ ಜ್ಯೋತಿಃ' (ಛಾಂ. ೩-೧೩-೭) ಇತ್ಯತ್ರ ಸರ್ವಸ್ಮಾತ್ ಪರತ್ವೇನ ನಿರ್ದಿಶ್ಯಮಾನತಯಾ ಸಕಲಕಾರಣಭೂತಜ್ಯೋತಿಷಃ

1. ಇದು ಛಾಂದೋಗ್ಯದಲ್ಲಿ. 2. ಇದು ತೈತ್ತಿರೀಯದಲ್ಲಿ.

3. ಇದು ಛಾಂದೋಗ್ಯದಲ್ಲಿ. 4. ಇದು ತೈತ್ತಿರೀಯಾರಣ್ಯಕದಲ್ಲಿ.

5. ಈ ಮೂರು ವಿಶೇಷಣಗಳು ಛಾಂದೋಗ್ಯದಲ್ಲಿ.

6. ಇದು ಶ್ವೇತಾಶ್ವತರದಲ್ಲಿ. ಈವರೆಗೆ ಕೊಟ್ಟಿರುವ ಪರಮಾತ್ಮನ ವಿಶೇಷಣಗಳನ್ನು ಈ ಗ್ರಂಥದಲ್ಲಿಯೇ ಅಲ್ಲಲ್ಲಿ ವಾಕ್ಯೋದಾಹರಣಪೂರ್ವಕವಾಗಿ ತಿಳಿಸಿಕೊಟ್ಟಿವೆ.

ಕೌಕ್ಷೇಯಜ್ಯೋತಿಷಾ ಐಕ್ಯಾಭಿಧಾನಾತ್, ಸ್ವವಾಕ್ಯೇ ವಿರೋಧಿಲಿಙ್ಗಾದರ್ಶನಾಚ್ಚ ಪ್ರಸಿದ್ಧಮೇವ ಜ್ಯೋತಿರ್ಜಗತ್ಕಾರಣತ್ವೇನ ಪ್ರತಿಪಾದ್ಯತ ಇತಿ ಶಙ್ಕಾಯಾಮ್। ಯದ್ಯಪಿ ಸ್ವವಾಕ್ಯೇ ವಿರೋಧಿಲಿಙ್ಗಂ ನ ದೃಶ್ಯತೇ ತಥಾಪಿ ಪೂರ್ವಸ್ಮಿನ್ ವಾಕ್ಯೇ 'ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ' (ಛಾಂ. ೩-೧೨-೬) ಇತಿ ಪ್ರತಿಪಾದಿತಸ್ಯ ಸರ್ವಭೂತಚರಣಸ್ಯ ಪರಮಪುರುಷಸ್ಯೈವ ದ್ಯುಸಂಬನ್ಧಿತಯಾ ಅತ್ರಾಪಿ ಪ್ರತ್ಯಭಿಜ್ಞಾನಾತ್ ಸ ಏವ ಜ್ಯೋತಿಃಶಬ್ದೇನ ಸರ್ವಸ್ಮಾತ್ ಪರತ್ವೇನ ಸಕಲಕಾರಣತಯಾ ಅಭಿಧೀಯತೇ ॥

(ಅರ್ಥ)

**೨೫. ಜ್ಯೋತಿಯು (ಬ್ರಹ್ಮವೇ), ಏಕೆಂದರೆ ಚರಣವನ್ನು ಹೇಳಿರುತ್ತದೆ.**

'ಇನ್ನು ಈ ದ್ಯುಲೋಕದ ಆಚೆಗೆ, ವಿಶ್ವಕ್ಕೆಲ್ಲ ಮೇಲಿನ, ಎಲ್ಲಕ್ಕೂ ಮೇಲಿನ, ಅನುತ್ತಮವಾದ ಉತ್ತಮಲೋಕಗಳಲ್ಲಿ ಯಾವ ಜ್ಯೋತಿಯು ಬೆಳಗುತ್ತಿರುವದೋ, ಈ ಪುರುಷನೊಳಗೆ ಜ್ಯೋತಿಯಿದೆಯಲ್ಲ, ಇದೇ ಅದು' (ಛಾಂ.೩-೧೩-೭) ಎಂಬಲ್ಲಿ 'ಎಲ್ಲಕ್ಕೂ ಆಚೆ' ಎಂದು ನಿರ್ದೇಶಮಾಡಿರುವದರಿಂದ ಸಕಲಜಗತ್ತಿಗೂ ಕಾರಣವೆನಿಸಿರುವ ಜ್ಯೋತಿಗೆ ಹೊಟ್ಟೆಯೊಳಗಿರುವ ಜ್ಯೋತಿಯೊಡನೆ ಐಕ್ಯವನ್ನು ಹೇಳಿರುವವರಿಂದಲೂ ಇದರ ವಾಕ್ಯವಲ್ಲಿ (ಇದಕ್ಕೆ) ವಿರುದ್ಧವಾದ (ಯಾವ) ಲಿಂಗವೂ ಇಲ್ಲದಿರುವದರಿಂದಲೂ[1] ಪ್ರಸಿದ್ಧವಾಗಿರುವ ಜ್ಯೋತಿಯನ್ನೇ (ಇಲ್ಲಿ) ಜಗತ್ಕಾರಣವೆಂದು ತಿಳಿಸಿದೆ ಎಂಬ ಶಂಕೆಯು ಬಂದರೆ—

(ಇದಕ್ಕೆ ಪರಿಹಾರವಾಗಿ ಸಿದ್ಧಾಂತವಿದು): ಇದರ ವಾಕ್ಯದಲ್ಲಿ ವಿರುದ್ಧವಾದ ಲಿಂಗವು (ಯಾವದೂ) ಕಾಣಿಸುತ್ತಿಲ್ಲ, ಆದರೂ ಹಿಂದಿನ ವಾಕ್ಯದಲ್ಲಿ 'ಇವನಿಗೆ ಎಲ್ಲಾ ಭೂತಗಳೂ ಒಂದು ಪಾದವು, ಇವನ ಅಮೃತವಾದ ಮೂರು ಪಾದವು ದ್ಯುಲೋಕದಲ್ಲಿದೆ' (ಛಾಂ. ೩-೧೨-೬) ಎಂದು ಪ್ರತಿಪಾದಿತವಾಗಿರುವ ಸರ್ವಭೂತಗಳೂ ತನ್ನ ಒಂದು ಚರಣವಾಗಿರುವ ಪರಮಪುರುಷನನ್ನೇ ಇಲ್ಲಿಯೂ ದ್ಯು(ಲೋಕ)ಸಂಬದ್ಧವಾಗಿ ಹೇಳಿರುವದು ಕಂಡುಬರುತ್ತಿರುವದರಿಂದ[2], ಅವನನ್ನೇ

1. ಪ್ರಸಿದ್ಧವಾದ ಜ್ಯೋತಿಯೇ ಜಗತ್ಕಾರಣವೆಂಬುದು ಶ್ರುತಿಯಿಂದ ಕಾಣಬರುತ್ತಿದೆ. ಹಿಂದಿನ ಅಧಿಕರಣಗಳಲ್ಲಿ ಆಕಾಶ, ಪ್ರಾಣ- ಎಂಬ ಶಬ್ದಗಳನ್ನು ಬ್ರಹ್ಮಪರವೆಂದು ನಿಶ್ಚಯಿಸುವದಕ್ಕೆ ಸರ್ವಭೂತಕಾರಣತ್ವವೇ ಮುಂತಾದ ಲಿಂಗಗಳು (ಬ್ರಹ್ಮವನ್ನು ತಿಳಿಸುವ ಗುರುತಿನ ಶಬ್ದಗಳು) ಆಯಾ ವಾಕ್ಯಗಳಲ್ಲಿಯೇ ಇದ್ದವಲ್ಲವೆ? ಹಾಗೆ ಇಲ್ಲಿ ಕಾಣುವದಿಲ್ಲ.

2. ಇದರಿಂದ ಈ ಜ್ಯೋತಿಯು ಹಿಂದೆ ಹೇಳಿದ ಬ್ರಹ್ಮವೇ ಎಂದು ಗೊತ್ತಾಗುತ್ತದೆ ಎಂದು ಭಾವ.

ಎಲ್ಲಕ್ಕೂ ಆಚೆ ಇರುವದರಿಂದ ಸಕಲಕಾರಣನು ಎಂದು ಜ್ಯೋತಿಃಶಬ್ದದಿಂದ ಹೇಳಿರುತ್ತದೆ (ಎಂದು ನಿಶ್ಚಯಿಸಬೇಕು).

(ಮೂಲ)

೨೮. ಅಸ್ಯ ಚ ಕೌಕ್ಷೇಯಜ್ಯೋತಿಷಾ ಐಕ್ಯಾಭಿಧಾನಂ ಫಲಾಯ ಉಪದಿಶ್ಯತ ಇತಿ ನ ಕಶ್ಚಿದ್ ವಿರೋಧಃ। ಅಖಿಲಜಗದೇಕಕಾರಣಭೂತಃ। ಪರಮಪುರುಷೋಽಪ್ರಾಕೃತಸ್ವಾಸಾಧಾರಣದಿವ್ಯವರ್ಣಃ, ದಿವ್ಯರೂಪಃ, ತಮಸಃ ಪರಸ್ತಾದ್ವರ್ತತ ಇತಿ ತಸ್ಯೈವ ನಿರತಿಶಯದೀಪ್ತಿಯೋಗಾತ್ ಜ್ಯೋತಿಃಶಬ್ದಾಭಿಧೇಯತ್ವಮ್। ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷು ವಾಸಶ್ಚ ಯುಜ್ಯತ ಏವ ॥ ೨೫ ॥

(ಅರ್ಥ)

ಇವನಿಗೆ ಹೊಟ್ಟೆಯೊಳಗಿರುವ ಜ್ಯೋತಿಯೊಡನೆ ಐಕ್ಯವನ್ನು ಹೇಳಿರುವದು ಫಲಕ್ಕಾಗಿ ಉಪದಿಷ್ಟವಾಗಿರುತ್ತದೆಯಾದ್ದರಿಂದ[1] (ಆದರಿಂದ) ಯಾವ ವಿರೋಧವೂ ಇಲ್ಲ. ಎಲ್ಲಾ ಜಗತ್ತಿಗೂ ತಾನೊಬ್ಬನೇ ಕಾರಣನಾಗಿರುವ ಪರಮಪುರುಷನು ಅಪ್ರಾಕೃತವಾದ ಅಸಾಧಾರಣವಾದ ದಿವ್ಯವರ್ಣವುಳ್ಳವನಾದ್ದರಿಂದಲೂ ದಿವ್ಯರೂಪನಾದ್ದರಿಂದಲೂ ತಮಸ್ಸಿಗಿಂತಲೂ ಆಚೆ ಇರುವದರಿಂದಲೂ ಆತನಿಗೇ ಮಿಗಿಲಿಲ್ಲದ ಹೊಳಪು (ಇದೆಯೆಂಬುದು) ಹೊಂದುವದರಿಂದ (ಅವನನ್ನು) ಜ್ಯೋತಿ ಎಂಬ ಶಬ್ದದಿಂದ ಹೇಳಿರುತ್ತದೆ.[2] ವಿಶ್ವವೆಲ್ಲಕ್ಕೂ ಮೇಲಿರುವ, ಎಲ್ಲಕ್ಕೂ ಮೇಲಿನ ಅನುತ್ತಮವಾದ ಉತ್ತಮಲೋಕಗಳಲ್ಲಿ ವಾಸಮಾಡುವದೂ (ಆತನಿಗೆ) ಹೊಂದಿಯೇ ಹೊಂದುತ್ತದೆ.[3]

## ೨೬. ಛಂದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ತಥಾ ಹಿ ದರ್ಶನಮ್। (೧-೧-೨೬)

(ಮೂಲ)

೨೯. ಪೂರ್ವತ್ರ 'ಗಾಯತ್ರೀ ವಾ ಇದಂ ಸರ್ವಮ್' (ಛಾಂ. ३-೧೨-೧) ಇತಿ ಗಾಯತ್ರ್ಯಾಖ್ಯಚ್ಛನ್ದಃ ಪ್ರಸ್ತುತಮಿತಿ ನಾತ್ರ ಪರಮಪುರುಷಾಭಿಧಾನಮಿತಿ ಚೇತ್। ನೈತತ್। ಪರಮಪುರುಷಸ್ಯೈವ ಗಾಯತ್ರೀಸಾದೃಶ್ಯಸ್ಯ ಅನುಸಂಧಾ

1. ಹೀಗೆಂದು ಉಪಾಸನೆಮಾಡಿದರೆ ಇಂಥ ಫಲ ಎಂದು ತಿಳಿಸುವದಕ್ಕಾಗಿ, ಬ್ರಹ್ಮವು ಹೊಟ್ಟೆಯೊಳಗಿನ ಅಗ್ನಿಯೇ ಎಂದು ಹೇಳುವದಕ್ಕಲ್ಲ.

2. ಜ್ಯೋತಿಯೇ ಆಗಿರಬೇಕೆಂಬ ನಿಯಮವೇನೂ ಇಲ್ಲ, ನಿರತಿಶಯಪ್ರಕಾಶವಾದದ್ದನ್ನು ಜ್ಯೋತಿ ಎನ್ನಬಹುದು ಎಂದು ಅಭಿಪ್ರಾಯ.

3. ಏಕೆಂದರೆ ಪರಮಪದದಲ್ಲಿ ವಾಸವಾಗಿರುವದು ನಾರಾಯಣನ ಧರ್ಮವು.

ನೋಪದೇಶಾತ್[1] । ತಸ್ಯ ಛನ್ದೋಮಾತ್ರಸ್ಯ ಸರ್ವಭೂತಾತ್ಮಕತ್ವಾನುಪಪತ್ತೇರೇವೇತಿ ನಿಗಮ್ಯತೇ । ಅನ್ಯತ್ರಾಪಿ ಹಿ ಅನ್ಯಸ್ಯ ಛನ್ದಃಸಾದೃಶ್ಯಾತ್ ಛನ್ದೋ ನಿರ್ದೇಶೋ ದೃಶ್ಯತೇ 'ತೇ ವಾ ಏತೇ ಪಞ್ಚಾನ್ಯೇ' ಇತ್ಯಾರಭ್ಯ 'ಸೈಷಾ ವಿರಾಟ್' (ಛಾಂ. ೪-೩-೮) ಇತ್ಯಾದೌ ॥ ೨೬ ॥

(ಅರ್ಥ)

**೨೬. ಛಂದಸ್ಸನ್ನು ಹೇಳಿರುವದರಿಂದ (ಬ್ರಹ್ಮ)ವಲ್ಲ ಎಂದರೆ ಹಾಗಲ್ಲ. ಏಕೆಂದರೆ ಹಾಗೆ ಚಿತ್ತವನ್ನು ಅರ್ಪಿಸಬೇಕೆಂದು ತಿಳಿಸಿದೆ ಹಾಗಲ್ಲವೆ, (ಹೇಳಿರುವದು ಬೇರೆ ಕಡೆಯಲ್ಲಿಯೂ) ಕಂಡುಬರುತ್ತದೆ?**

ಇದರ ಹಿಂದಿನ ವಾಕ್ಯದಲ್ಲಿ 'ಗಾಯತ್ರಿಯೇ ಇವೆಲ್ಲವೂ' (ಛಾಂ. ೩-೧೨-೧) ಎಂದು ಗಾಯತ್ರಿ ಎಂಬ ಹೆಸರಿನ ಛಂದಸ್ಸನ್ನು ಪ್ರಸ್ತಾಪಿಸಿದೆಯಾದ್ದರಿಂದ ಇಲ್ಲಿ (ಅಲ್ಲಿ ಹೇಳಿದ್ದ)ಪರಮಪುರುಷನನ್ನೇ ಹೇಳಿದೆ(ಎಂಬುದು ಸರಿ)ಯಲ್ಲ- ಎಂದರೆ—

ಇದು (ಸರಿ)ಯಲ್ಲ. ಏಕೆಂದರೆ ಪರಮಪುರುಷನನ್ನೇ ಗಾಯತ್ರಿಗೆ ಸಮಾನವಾಗಿ (ನಾಲ್ಕು ಪಾದಗಳುಳ್ಳವನು) ಎಂದು ಉಪಾಸನೆಮಾಡಬೇಕೆಂದು (ಅಲ್ಲಿ) ಉಪದೇಶಿಸಿರುತ್ತದೆ (ಎಂದು ತಿಳಿಯಬೇಕು). ಅದೇಕೆಂದರೆ ಆ ಬರಿಯ ಛಂದಸ್ಸಿಗೆ ಸರ್ವಭೂತಾತ್ಮಕನಾಗಿರುವದೆಂಬುದು ಹೊಂದುವದಿಲ್ಲವಾದ್ದರಿಂದಲೇ ಎಂದು (ಹೀಗೆ) ಉಪದೇಶಿಸಿರುತ್ತದೆ. ಬೇರೆ (ಶ್ರುತಿ)ಯಲ್ಲಿಯೂ ಛಂದಸ್ಸಿನ ಹೋಲಿಕೆಯಿಂದ ಮತ್ತೊಂದು ವಸ್ತುವನ್ನು ಛಂದೋ(ವಾಚಿಯಾದ ಶಬ್ದ)ದಿಂದ ಹೇಳಿರುವದು ಕಂಡುಬರುತ್ತದೆಯಲ್ಲವೆ ? (ಎಲ್ಲೆಂದರೆ) 'ಆ ಇವು ಐದು ಕೆಲವು, ಐದು ಮತ್ತೆ ಬೇರೆ- (ಹೀಗೆ ಹತ್ತಾಗುತ್ತವೆ)' ಎಂದು ಪ್ರಾರಂಭಿಸಿ 'ಆ ಇದು ವಿರಾಟ್ (ಎಂಬ ಅನ್ನಾತ್ ಆಗಿದೆ)' (ಛಾಂ. ೪-೩-೮) ಮುಂತಾದ ಕಡೆಯಲ್ಲಿ.[2]

---

1. 'ಉಪದೇಶತ್ವಾತ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ಅಗ್ನ್ಯಾದಿಗಳು ಐವರು, ವಾಗಾದಿಗಳು ಐದು- ಹತ್ತು ಆಗಿರುತ್ತಾರೆ. ವಿರಾಟ್ಛಂದಸ್ಸಿನಲ್ಲಿ ಹತ್ತು ಅಕ್ಷರಗಳಿವೆಯಾದ್ದರಿಂದ ದಶದೇವತಾತ್ಮನಾದ ವಿರಾಟ್ಪುರುಷನನ್ನೇ ಉಪಾಸನೆ ಮಾಡಿದಂತೆ ಸಂವರ್ಗವಿದ್ಯೋಪಾಸಕನು ದಶದಿಕ್ಕುಗಳಲ್ಲಿಯೂ ಇರುವ ಪದಾರ್ಥಗಳನ್ನೆಲ್ಲ ಉಪಾಸನೆಮಾಡಿದವನಾಗುತ್ತಾನೆ. ಅದರಿಂದ ಅವನು ಸರ್ವಜ್ಞನೂ ಬ್ರಹ್ಮಲಕ್ಷಣಾನ್ನವನ್ನು ಅನುಭವಿಸಿದವನೂ ಆಗುತ್ತಾನೆ ಎಂದು ಶ್ರುತಿಗೆ ರಂಗರಾಮಾನುಜರು ಅರ್ಥವನ್ನು ಬರೆದಿರುತ್ತಾರೆ. ಶ್ರೀಭಾಷ್ಯದಲ್ಲಿ 'ಸೈಷಾ ವಿರಾಡನ್ನಾತ್' ಎಂಬ ಪಾಠವನ್ನು ಸ್ವೀಕರಿಸಿದೆ. ಅನ್ನಾತ್ ಎಂದರೆ ಅನ್ನವೂ ಅತ್ತೃವೂ- ಭೋಗ್ಯಭೋಕ್ತೃಗಳಿಗೆ ಆಶ್ರಯನಾದ ಪರಮಾತ್ಮನು ಎಂದರ್ಥ. ಇಲ್ಲಿ ವಿರಾಟ್ಛಂದಸ್ಸಿನ ಹೆಸರನ್ನು ಹತ್ತು ಎಂಬ ಸಂಖ್ಯೆಯ ಹೋಲಿಕೆಯಿಂದ ಪರಮಾತ್ಮನಿಗೆ ಹೋಲಿಸಿದೆ.

## ೨೭. ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್ (೧-೧-೨೭)

(ಮೂಲ)

೩೦. ಭೂತಪೃಥಿವೀಶರೀರಹೃದಯೈಶ್ಚತುಷ್ಪದಾ ಇತಿ ವ್ಯಪದೇಶಶ್ಚ ಪರಮಪುರುಷೇ ಗಾಯತ್ರೀಶಬ್ದನಿರ್ದಿಷ್ಟೇ ಹ್ಯುಪಪದ್ಯತ ಇತಿ ಪೂರ್ವೋಕ್ತ ಪ್ರಕಾರ ಏವ ಸಮಞ್ಜಸಃ ॥ ೨೭ ॥

(ಅರ್ಥ)

**೨೭. ಭೂತಾದಿಗಳು ಪಾದಗಳೆಂದು ಹೇಳಿರುವದು ಹೊಂದುವದರಿಂದಲೂ ಹೀಗೆ.**

ಭೂತಗಳು, ಪೃಥಿವೀ, ಶರೀರ, ಹೃದಯ– ಎಂಬೀ ನಾಲ್ಕು ಪಾದಗಳುಳ್ಳದ್ದು (ಗಾಯತ್ರಿ) ಎಂದು ಹೇಳಿರುವದೂ ಪರಮಪುರುಷನನ್ನೇ ಗಾಯತ್ರೀಶಬ್ದದಿಂದ ತಿಳಿಸಿದೆ (ಎಂಬ ಪಕ್ಷದಲ್ಲಿಯೇ) ಹೊಂದುತ್ತದೆ; ಆದ್ದರಿಂದ ಹಿಂದೆ (ನಾವು) ಹೇಳಿರುವ ಪಕ್ಷವೇ ಸಮಂಜಸವು.

## ೨೮. ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್ ॥ (೧–೧–೨೮)

(ಮೂಲ)

೩೧. ಪೂರ್ವತ್ರ 'ತ್ರಿಪಾದಸ್ಯಾಮೃತಂ ದಿವಿ' (ಛಾಂ. ೩–೧೨–೬) ಇತಿ ಪರಮಪುರುಷೋ ವ್ಯಪದಿಶ್ಯತೇ । ಅತ್ರ 'ಅಥ ಯದತಃ ಪರೋ ದಿವಃ' (ಛಾಂ. ೩–೧೩–೭) ಇತಿ ಪಞ್ಚಮ್ಯಾ ನಿರ್ದಿಷ್ಟಂ[1] ದ್ಯುಸಂಬನ್ಧಜ್ಯೋತಿರಿತಿ ನ ಪ್ರತ್ಯಭಿಜ್ಞಾ ಇತಿ ಚೇತ್। ನೈತತ್। ಉಭಯಸ್ಮಿನ್ನಪಿ ವ್ಯಪದೇಶೇ ವಿರೋಧಾಭಾವಾತ್। ಯಥಾ 'ವೃಕ್ಷಾಗ್ರೇ ಶ್ಯೇನಃ', 'ವೃಕ್ಷಾಗ್ರಾತ್ಪರತಃ ಶ್ಯೇನಃ' ಇತಿ ವ್ಯಪದೇಶಃ। ಅತ್ರ ದಿವಃ ಪರತ್ವಮೇವ ಉಭಯತ್ರ ವಿವಕ್ಷಿತಮ್ ಇತ್ಯರ್ಥಃ ॥

(ಅರ್ಥ)

**೨೮. ಉಪದೇಶಭೇದವಿರುವದರಿಂದ (ಇದು ಸರಿ)ಯಲ್ಲ, ಎಂದರೆ; ಹಾಗಲ್ಲ, ಏಕೆಂದರೆ ಎರಡರಲ್ಲಿಯೂ ವಿರೋಧವಿಲ್ಲ.**

ಹಿಂದಿನ ವಾಕ್ಯದಲ್ಲಿ 'ಇವನ ಮೂರು ಪಾದಗಳು ದ್ಯುಲೋಕದಲ್ಲಿ' (ಛಾಂ. ೩–೧೨–೬) ಎಂದು ಪರಮಪುರುಷನನ್ನು ಹೇಳಿದೆ. ಇಲ್ಲಿ 'ಇನ್ನು ಈ ದ್ಯುಲೋಕಕ್ಕಿಂತ ಆಚೆ' (ಛಾಂ. ೩–೧೩–೭) ಎಂದು ಪಂಚಮೀವಿಭಕ್ತಿಯಿಂದ

---

1. 'ನಿರ್ದಿಷ್ಟಃ' ಎಂದೇ ಅಚ್ಚಿನ ಪಾಠ; 'ಜ್ಯೋತಿಃ' ಎಂಬುವಕ್ಕೆ ವಿಶೇಷಣವಾದ್ದರಿಂದ ನಿರ್ದಿಷ್ಟಂ ಎಂದು ನಪುಂಸಕಲಿಂಗಕ್ಕೇ ನಾವು ತಿರುಗಿಸಿಕೊಂಡಿರುತ್ತೇವೆ.

ದ್ಯುಲೋಕಸಂಬದ್ಧವಾದ ಜ್ಯೋತಿಯನ್ನು ಹೇಳಿದೆ. ಆದ್ದರಿಂದ[1] (ಹಿಂದಿನ ಪರಮಪುರುಷನನ್ನೇ ಇಲ್ಲಿ) ಗುರುತಿಸಿ ತಿಳಿಯುವಂತಿಲ್ಲವಲ್ಲ! ಎಂದರೆ—

ಇದು ಸರಿಯಲ್ಲ. ಏಕೆಂದರೆ (ಈ) ಎರಡು ಪ್ರಕಾರದ ವ್ಯಪದೇಶದಲ್ಲಿಯೂ ವಿರೋಧವಿರುವದಿಲ್ಲ. 'ಮರದ ತುದಿಯಲ್ಲಿ ಗಿಡುಗನು', 'ಮರದ ತುದಿಯಿಂದಾಚೆಗೆ ಗಿಡುಗನು' -ಎಂದು (ಹೇಗೆ ಎರಡು ಪ್ರಕಾರವಾಗಿ) ವ್ಯಪದೇಶಮಾಡುವರೋ (ಹಾಗೆಯೇ ಇದು). ಇಲ್ಲಿ ದ್ಯುಲೋಕಕ್ಕಿಂತ ಆಚೆಯಿರುವನೆಂಬುದೇ ಎರಡು ವಾಕ್ಯಗಳಲ್ಲಿಯೂ ವಿವಕ್ಷಿತವಾಗಿರುತ್ತದೆ[2] ಎಂದರ್ಥ. ॥ ೨೮ ॥

## ಇಂದ್ರಪ್ರಾಣಾಧಿಕರಣ

### ೨೯. ಪ್ರಾಣಸ್ತಥಾನುಗಮಾತ್ (೧-೧-೨೯)

(ಮೂಲ)

೩೨. ಆತ್ಮನಾಂ ಹಿತತಮರೂಪಮೋಕ್ಷಸಾಧನೋಪಾಸನಕರ್ಮತಯಾ ಪ್ರಜ್ಞಾತಜೀವಭಾವಸ್ಯ ಇನ್ದ್ರಸ್ಯ 'ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತಂ ಮಾ ಮಾಯುರಮೃತಮಿತ್ಯುಪಾಸ್ವ' (ಕೌ. ೩-೧) ಇತಿ ವಿಧಾನಾತ್ ಸ ಏವ ಜಗತ್ಕಾರಣಮ್। ಕಾರಣೋಪಾಸನಂ ಹಿ ಮೋಕ್ಷಸಾಧನಮ್। 'ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ। ಅಥ ಸಂಪತ್ಸ್ಯೇ' (ಛಾಂ. ೬-೧೪-೨) ಇತಿ ಶ್ರುತೇಃ-ಇತಿ ನಾಶಙ್ಕನೀಯಮ್। ಪ್ರಾಣಶಬ್ದಸಮಾನಾಧಿಕರಣೇನ್ದ್ರಶಬ್ದನಿರ್ದಿಷ್ಟೋ ಜೀವಾದರ್ಥಾನ್ತರಭೂತ ಉಕ್ತಲಕ್ಷಣಃ ಪರಮಾತ್ಮೈವ। ಕುತಃ? ತಥಾನುಗಮಾತ್। ಪರಮಾತ್ಮಾ ಸಾಧಾರಣಾನನ್ದಾಜರಾಮೃತಾದಿಷು ಅಸ್ಯ ಇನ್ದ್ರಪ್ರಾಣಶಬ್ದನಿರ್ದಿಷ್ಟಸ್ಯ[3] ಅನುಗಮೋ ಹಿ ದೃಶ್ಯತೇ। 'ಸ ಏಷ ಪ್ರಾಣ ಏವ ಪ್ರಜ್ಞಾತ್ಮಾಽಽನನ್ದೋಽಜರೋಽಮೃತಃ' (ಕೌ. ೩-೯) ಇತಿ ॥ ೨೯ ॥

(ಅರ್ಥ)

**೨೯. ಪ್ರಾಣನು (ಬ್ರಹ್ಮವೇ), ಏಕೆಂದರೆ ಹಾಗೆ ಅನುಗಮವಿದೆ.**

---

1. ಒಂದು ಕಡೆ ಸಪ್ತಮೀವಿಭಕ್ತಿ, ಇನ್ನೊಂದು ಕಡೆ ಪಂಚಮೀವಿಭಕ್ತಿ -ಹೀಗೆ ಪ್ರಯೋಗಭೇದವಿರುವದರಿಂದ ಎಂದರ್ಥ.

2. ಗಿಡುಗನು ಮರದ ಮೇಲುಗಡೆ ಹಾರಾಡುತ್ತಿದ್ದರೂ ಮರದ ತುದಿಯಲ್ಲಿ ಎಂದೇ ಪ್ರಯೋಗಿಸುವಂತೆ ಇಲ್ಲಿಯೂ 'ದಿವಿ' ಎಂದರೆ ದ್ಯುಲೋಕದಲ್ಲಿ ಎಂಬರ್ಥವೇನೂ ಇಲ್ಲ, ದ್ಯುಲೋಕದಿಂದ ಆಚೆ ಎಂದೇ ಅಭಿಪ್ರಾಯ- ಎಂದು ಭಾವ.

3 'ಪ್ರಾಣಶಬ್ದಸ್ಯಾನುಗಮೋ' ಎಂದು ಪಾ॥. ಈಗ ನಾವು ಕೊಟ್ಟಿರುವ ಪಾಠವೇ ಶ್ರೀಭಾಷ್ಯದಲ್ಲಿಯೂ ಇದೆ.

ಆತ್ಮರುಗಳಿಗೆ ಹಿತತಮರೂಪವಾಗಿರುವ[1] ಮೋಕ್ಷಕ್ಕೆ ಸಾಧನವಾದ ಉಪಾಸನಕ್ಕೆ ವಿಷಯನೆಂದು ಜೀವರೂಪನೆಂದೇ ಗೊತ್ತಾಗಿರುವ ಇಂದ್ರನನ್ನು 'ಪ್ರಾಣನಾದ ಪ್ರಜ್ಞಾತ್ಮನಾಗಿರುವೆನು; ಆ ನನ್ನನ್ನು ಆಯುಸ್ಸು, ಅಮೃತವು-ಎಂದು ಉಪಾಸನೆಮಾಡು' (ಕೌ. ೩-೧) ಎಂದು ವಿಧಾನಮಾಡಿರುವದರಿಂದ[2] ಆ (ಇಂದ್ರನೇ) ಜಗತ್ಕಾರಣನು. ಕಾರಣನನ್ನು ಉಪಾಸನೆಮಾಡುವದೇ ಅಲ್ಲವೆ ಮೋಕ್ಷಕ್ಕೆ ಸಾಧನವು? ಏಕೆಂದರೆ 'ಆ (ಸದ್ಬ್ರಹ್ಮೋಪಾಸಕನಿಗೆ) ಅಲ್ಲಿಯವರೆಗೇ ತಡ, ಎಲ್ಲಿಯವರೆಗೆ ಶರೀರದಿಂದ ಬಿಡುಗಡೆಯಾಗುವದಿಲ್ಲವೋ (ಅಲ್ಲಿಯವರೆಗೆ) ಆಮೇಲೆ ಸೇರಿಕೊಳ್ಳುವನು' (ಛಾಂ. ೬-೧೪-೨) ಎಂದು ಶ್ರುತಿಯಿದೆ. ಹೀಗೆಂದು ಆಶಂಕೆಮಾಡಬಾರದು.

ಏಕೆಂದರೆ ಪ್ರಾಣಶಬ್ದಕ್ಕೆ ಸಮಾನಾಧಿಕರಣವಾಗಿ[3] ಇಂದ್ರಶಬ್ದದಿಂದ ಹೇಳಿರುವವನು ಜೀವಕ್ಕಿಂತ ಬೇರೊಂದು ವಸ್ತುವಾಗಿರುವ ಉಕ್ತಲಕ್ಷಣನಾದ[4] ಪರಮಾತ್ಮನೇ. ಏಕೆ? ಎಂದರೆ, ಹಾಗೆ ಅನುಗಮವಿದೆ. ಪರಮಾತ್ಮನಿಗೆ ಅಸಾಧಾರಣವಾಗಿರುವ ಆನಂದ, ಅಜರತ್ವ, ಅಮೃತತ್ವ- ಮುಂತಾದವುಗಳಲ್ಲಿ ಇಂದ್ರಪ್ರಾಣಶಬ್ದಗಳಿಂದ ನಿರ್ದಿಷ್ಟನಾಗಿರುವವನಿಗೆ 'ಆ ಈ ಪ್ರಾಣವೇ ಪ್ರಜ್ಞಾತ್ಮನು, ಆನಂದಸ್ವರೂಪನು, ಅಜರನು, ಅಮೃತನು' (ಕೌ. ೩-೯) ಎಂದು ಅನುಗಮವು[5] ಕಂಡುಬರುತ್ತದೆಯಷ್ಟೆ?

## ೩೦. ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮ ಸಂಬನ್ಧಭೂಮಾ ಹ್ಯಸ್ಮಿನ್ (೧-೧-೩೦)

(ಮೂಲ)

೩೩. ಉಪಕ್ರಮೇ ಹಿ 'ಮಾಮೇವ ವಿಜಾನೀಹಿ' (ಕೌ. ೩-೧) ಇತಿ ತ್ವಾಷ್ಟ್ರವಧಾದಿನಾ ಪ್ರಜ್ಞಾತಜೀವಭಾವಸ್ಯ ಇನ್ದ್ರಸ್ಯೋಪದೇಶಾತ್, ಉಪ

---

1. ಪ್ರತರ್ದನನು 'ಮನುಷ್ಯನಿಗೆ ಹಿತತಮವೆಂದು ನಿನಗೆ ತಿಳಿದಿರುವದನ್ನು ನೀನೇ ಹೇಳಿಕೊಡು' ಎಂದು ಇಂದ್ರನನ್ನು ಕೇಳಿಕೊಂಡಿರುತ್ತಾನೆ. ಮೋಕ್ಷಸಾಧನವೇ ಹಿತತಮವಾದದ್ದು.

2. ಇಂದ್ರನನ್ನು ಪ್ರಾಣನೆಂದು ಉಪಾಸನೆಮಾಡಬೇಕೆಂದು ವಿಧಿಸಿರುವದರಿಂದ ಎಂದರ್ಥ.

3. 'ನನ್ನನ್ನು ಪ್ರಾಣನೆಂದು ಉಪಾಸನೆಮಾಡು' ಎಂದು ಇಂದ್ರನು ಹೇಳಿರುವದರಿಂದ ಇಂದ್ರನೂ ಪ್ರಾಣನೂ ಒಬ್ಬನೇ ಎಂದಾಯಿತು.

4. ಹಿತತಮವಾದ, ಮೋಕ್ಷಸಾಧನವಾದ, ಉಪಾಸನೆಗೆ ವಿಷಯನಾಗಿರುವ.

5. ಆನಂದಾಜರಾಮೃತತ್ವಗಳು ಪರಮಾತ್ಮನಿಗೆ ಮಾತ್ರ ಹೊಂದುತ್ತವೆ; ಅವೂ ಇಲ್ಲಿ ಬಂದಿರುವದರಿಂದ ಇದು ಕೇವಲದೇವತಾರೂಪನಾದ ಇಂದ್ರನ ವಿಷಯದ ಉಪಾಸನೆಯೆನ್ನುವದಕ್ಕಿಲ್ಲ.

ಸಂಹಾರಸ್ತದನುಗುಣೋ ವರ್ಣನೀಯ ಇತಿ ಚೇತ್। ನೈತತ್। ಅಧ್ಯಾತ್ಮ ಸಂಬನ್ಧಭೂಮಾ ಹ್ಯಸ್ಮಿನ್। ಅಧ್ಯಾತ್ಮಂ ಪರಮಾತ್ಮಧರ್ಮಃ। ಪರಮಾತ್ಮಧರ್ಮ ಸಂಬನ್ಧಬಹುತ್ವಮಸ್ಮಿನ್ನಿನ್ದ್ರಶಬ್ದಾಭಿಧೇಯೇ ವಾಕ್ಯೋಪಕ್ರಮಪ್ರಭೃತಿ ಉಪ ಸಂಹಾರಾತ್ ದೃಶ್ಯತೇ। 'ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ' (ಕೌ. ೩-೧) ಇತಿ ಹಿತತಮೋಪಾಸನಂ ಪ್ರಾರಬ್ಧಮ್। ತಚ್ಚ ಪರಮಾತ್ಮ ಧರ್ಮಃ। 'ತಮೇವಂ ವಿದ್ವಾನಮೃತ ಇಹ ಭವತಿ। ನಾನ್ಯಃ ಪನ್ಥಾಃ' (ತೈ. ಆ. ೩-೧೩-೩೯) ಇತ್ಯಾದಿಶ್ರುತೇಃ। ತಥಾ 'ಏಷ ಏವ ಸಾಧು ಕರ್ಮ ಕಾರಯತಿ' (ಕೌ. ೩-೯) ಇತ್ಯಾದಿನಾ ಸರ್ವಸ್ಯ ಕಾರಯಿತೃತ್ವಮ್, 'ಏವಮೇವೈತಾ ಭೂತ ಮಾತ್ರಾಃ' (ಕೌ. ೩-೯) ಇತ್ಯಾರಭ್ಯ 'ಪ್ರಜ್ಞಾಮಾತ್ರಾಃ ಪ್ರಾಣೇऽ[1]ರ್ಪಿತಾಃ' (ಕೌ. ೩-೯) ಇತಿ ಸರ್ವಾಧಾರತ್ವಮ್, ತಥಾ ಆನನ್ದಾದಯಶ್ಚ। 'ಏಷ ಲೋಕಾಧಿಪತಿಃ' (ಕೌ. ೩-೯) ಇತ್ಯಾದಿನಾ ಸರ್ವೇಶ್ವರತ್ವಂ ಚ॥

(ಅರ್ಥ)

**೩೦. ಹೇಳಿದವನ ಸ್ವರೂಪವನ್ನೇ ತಿಳಿಸಿರುವದರಿಂದ (ಇದು) ಸರಿಯಲ್ಲ ಎಂದರೆ, ಹಾಗಲ್ಲ. ಇವನಲ್ಲಿ ಆಧ್ಯಾತ್ಮಸಂಬಂಧಬಹುತ್ವವು ಇದೆಯಷ್ಟೆ?**

ಉಪಕ್ರಮದಲ್ಲಿ 'ನನ್ನನ್ನೇ ತಿಳಿದುಕೊ'[2] (ಕೌ. ೩-೧) ಎಂದು ತ್ವಾಷ್ಟ್ರ ನನ್ನು ಕೊಂದದ್ದು ಮುಂತಾದ[3] (ಕೃತ್ಯಗಳಿಂದ) ಜೀವನೆಂದು ಗೊತ್ತಾಗಿರುವ ಇಂದ್ರನನ್ನೇ ಉಪದೇಶಮಾಡಿರುವದರಿಂದ ಉಪಸಂಹಾರವನ್ನು ಅದಕ್ಕನುಗುಣ ವಾಗಿಯೇ ವರ್ಣಿಸಬೇಕು[4] ಎಂದರೆ—

ಇದು ಸರಿಯಲ್ಲ, ಏಕೆಂದರೆ ಇವನಲ್ಲಿ ಅಧ್ಯಾತ್ಮದ ಸಂಬಂಧವು ಬಹಳ ವಾಗಿರುತ್ತದೆ. ಅಧ್ಯಾತ್ಮವೆಂದರೆ ಪರಮಾತ್ಮಧರ್ಮವು. ಈ ಇಂದ್ರಶಬ್ದವಾಚ್ಯ ನಾದವನಲ್ಲಿ ಪರಮಾತ್ಮಧರ್ಮಗಳ ಸಂಬಂಧವು ಬಹಳವಾಗಿ ಉಪಕ್ರಮದಿಂದ ಉಪಸಂಹಾರದವರೆಗೂ ಕಂಡುಬರುತ್ತಿದೆ. 'ಮನುಷ್ಯನಿಗೆ ಹಿತತಮವಾದದ್ದು ಯಾವದೆಂದು ತಿಳಿದಿರುವೆಯೋ ಅದನ್ನು ಹೇಳು' (ಕೌ. ೩-೧) ಎಂದು ಹಿತತಮ ವಾದ ಉಪಾಸನೆಯನ್ನು ಪ್ರಾರಂಭಿಸಿದೆ; ಅದು ಪರಮಾತ್ಮನ ಧರ್ಮವು. ಏಕೆಂದರೆ 'ಅವನನ್ನು ಹೀಗೆಂದು ಅರಿತುಕೊಂಡವನು ಇಲ್ಲಿ ಅಮೃತನಾಗುತ್ತಾನೆ, (ಅದನ್ನು ಪಡೆಯುವದಕ್ಕೆ) ಮತ್ತೊಂದು ಹಾದಿಯಿಲ್ಲ' (ತೈ. ಆ. ೩-೧೩-೩೯)

1. 'ಪ್ರಾಣೇಷ್ವರ್ಪಿತಾಃ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.
2. ನನ್ನನ್ನೇ ಉಪಾಸನೆಮಾಡು ಎಂದು ಇಂದ್ರನು ಹೇಳಿಕೊಟ್ಟದ್ದಾನೆ.
3. ಯತಿಗಳನ್ನು ಕಾಡುತೋಳಗಳಿಗೆ ಬಲಿಕೊಟ್ಟದ್ದು ಮುಂತಾದ.
4. ಮೊದಲು ಇಂದ್ರನೆಂಬ ಜೀವನನ್ನು ಹೇಳಿರುವದರಿಂದ ಕೊನೆಯಲ್ಲಿರುವ ಆನಂದಾದಿಗಳನ್ನು ಹೇಗೋ ಆವನಿಗೇ ಹೊಂದಿಸಬೇಕು ಎಂದು ಅಭಿಪ್ರಾಯ.

ಎಂದು ಮುಂತಾಗಿ ಶ್ರುತಿಯಿದೆ.[1] ಮತ್ತು 'ಈತನೇ ಒಳ್ಳೆಯ ಕರ್ಮವನ್ನು ಮಾಡಿಸುತ್ತಾನೆ' (ಕೌ. ३-೯) ಎಂದು ಎಲ್ಲರನ್ನೂ ಕರ್ಮದಲ್ಲಿ ತೊಡಗಿಸುವ ದೆಂಬುದೂ 'ಹೀಗೆಯೇ ಈ ಭೂತಮಾತ್ರೆಗಳು' ಎಂದು ಪ್ರಾರಂಭಿಸಿ 'ಪ್ರಜ್ಞಾ ಮಾತ್ರೆಗಳು ಪ್ರಾಣನಲ್ಲಿ ಅರ್ಪಿತವಾಗಿರುತ್ತವೆ' (ಕೌ. ३-೯) ಎಂದು ಸರ್ವಾಧಾರತ್ವ ಮತ್ತು ಆನಂದಾದಿಗಳು, 'ಈತನೇ ಲೋಕಗಳಿಗೆ ಅಧಿಪತಿಯು' (ಕೌ. ३-೯) ಮುಂತಾದ[2] ವಾಕ್ಯದಿಂದ ಹೇಳಿರುವ ಸರ್ವೇಶ್ವರತ್ವ- (ಇವೆಲ್ಲ ಪರಮಾತ್ಮಧರ್ಮ ಗಳು).

## ३೧. ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ (೧-೧-३೧)

(ಮೂಲ)

३೪. ನಾಮರೂಪವ್ಯಾಕರಣಾದಿಶಾಸ್ತ್ರಾತ್ ಸರ್ವಶಬ್ದೈಃ ಪರಮಾತ್ಮೈವ ಅಭಿಧೀಯತೇ ಇತಿ ದೃಷ್ಟ್ಯಾ ತಜ್ಜ್ಞಾಪನಾಯ ಅಯಮಿನ್ದ್ರಶಬ್ದೇನ ಪರ ಮಾತ್ಮೋಪದೇಶಃ । ಶಾಸ್ತ್ರಸ್ಥಾ ಹಿ ವಾಮದೇವಾದಯಃ ತಥೈವ ವದನ್ತಿ 'ತದ್ಧೈತತ್ಪಶ್ಯನ್ ಋಷಿರ್ವಾಮದೇವಃ ಪ್ರತಿಪೇದೇ ಅಹಂ ಮನುರಭವಂ ಸೂರ್ಯಶ್ಚ' (ಬೃ. ೧-೪-೧೦)[3] ಇತಿ ॥

(ಅರ್ಥ)

**३೧. ಆದರೆ ಉಪದೇಶವು ಶಾಸ್ತ್ರದೃಷ್ಟಿಯಿಂದ, ವಾಮದೇವ ನಂತೆ.**

ನಾಮರೂಪವ್ಯಾಕರಣವನ್ನು ಹೇಳುವದೇ ಮುಂತಾದ[4] ಶಾಸ್ತ್ರದಿಂದ ಸರ್ವ ಶಬ್ದಗಳಿಗೂ ಪರಮಾತ್ಮನೇ ವಾಚ್ಯನಾಗಿರುತ್ತಾನೆ ಎಂಬ ದೃಷ್ಟಿಯಿಂದ ಅದನ್ನು ತಿಳಿಸಿಕೊಡುವದಕ್ಕಾಗಿ ಹೀಗೆ ಇಂದ್ರಶಬ್ದದಿಂದ ಪರಮಾತ್ಮನನ್ನು ಹೇಳಿರುತ್ತದೆ. ಶಾಸ್ತ್ರವನ್ನು (ಬಲ್ಲ ಶಾಸ್ತ್ರದೃಷ್ಟಿಯಲ್ಲಿಯೇ) ನಿಂತಿರುವ ವಾಮದೇವಾದಿಗಳು

---

1. ಪರಮಾತ್ಮನನ್ನು ಉಪಾಸನೆಮಾಡಿದ ಹೊರತು ಮೋಕ್ಷವು ಬೇರೊಂದು ಮಾರ್ಗ ದಿಂದ ದೊರಕುವದೇ ಇಲ್ಲ ಎಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದೆ.

2. ಇವನೇ ಲೋಕಪಾಲನು, ಇವನೇ ಲೋಕಾಧಿಪತಿಯು, ಇವನೇ ಸರ್ವೇಶ್ವರನು -ಎಂದು ಈ ವಾಕ್ಯದಲ್ಲಿದೆ. ಮುಂದೆ 'ಅವನೇ ನನ್ನ ಆತ್ಮನು ಎಂದು ಅರಿಯಬೇಕು' ಎಂದೂ ಇದೆ.

3. ಈ ವಾಕ್ಯವು ಬೃಹದಾರಣ್ಯಕದಲ್ಲಿದೆಯಾದರೂ ವೇದಾಂತದೀಪಶ್ರೀಭಾಷ್ಯ ಗಳಲ್ಲಿ ಉದಾಹರಿಸಿರುವ 'ಅಹಂ ಕಕ್ಷೀವಾನೃಷಿರಸ್ಮಿ ವಿಪ್ರ' ಎಂಬ ಇವರ ಮುಂದಿನ ಭಾಗವು ಋಗ್ವೇದದಲ್ಲಿ ಮಾತ್ರ ಇದೆ.

4. ಮುಂತಾದ ಎಂಬುದರಿಂದ 'ಜೀವರೊಳಗೆ ಹೊಕ್ಕು ಶಾಸಕನಾಗಿ ಸರ್ವಾತ್ಮನಾಗಿರು ತ್ತಾನೆ', ಆತ್ಮನು ಇವನಿಗೆ ಶರೀರವು'- ಎಂಬುದೇ ಮುಂತಾದ ಶಾಸ್ತ್ರಗಳನ್ನು ಗ್ರಹಿಸಬೇಕು.

ಹಾಗೆಯೇ ಹೇಳುತ್ತಾರಲ್ಲವೆ ? 'ಇದನ್ನು ಕಂಡುಕೊಂಡವನಾಗಿ ವಾಮದೇವ ಋಷಿಯು ನಾನು ಮನುವಾಗಿದ್ದೆನು, ಸೂರ್ಯನೂ ಆಗಿದ್ದೆನು' (ಬೃ. ೧-೪-೧೦) ಎಂದು (ಶ್ರುತಿಯಿದೆ).

## ೩೨. ಜೀವಮುಖ್ಯಪ್ರಾಣಲಿಙ್ಗಾನ್ನೇತಿ ಚೇನ್ನೋಪಾಸಾ ತ್ರೈವಿಧ್ಯಾದಾಶ್ರಿತತ್ವಾದಿಹ ತದ್ಯೋಗಾತ್ । (೧-೧-೩೨)

(ಮೂಲ)

೩೫. 'ತ್ರಿಶೀರ್ಷಾಣಂ ತ್ವಾಷ್ಟ್ರಮಹನಮ್' (ಕೌ. ೩-೧), 'ಯಾವದ್ಧ್ಯಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುಃ' (ಕೌ. ೩-೨) ಇತ್ಯಾದಿ ಜೀವಲಿಙ್ಗಂ ಮುಖ್ಯಪ್ರಾಣಲಿಙ್ಗಂ ಚ ಅಸ್ಮಿನ್ ದೃಶ್ಯತ ಇತಿ ನೈವಮ್ ಇತಿ ಚೇತ್। ನ। ಉಪಾಸಾತ್ರೈವಿಧ್ಯಾದ್ಧೇತೋಃ, ಜೀವಶಬ್ದೇನ ಪ್ರಾಣಶಬ್ದೇನ ಚ ಪರಮಾತ್ಮನೋಽಭಿಧಾನಮ್ । ಅನ್ಯತ್ರಾಪಿ ಪರಮಾತ್ಮನಃ ಸ್ವರೂಪೇಣೋಪಾಸನಂ ಭೋಕ್ತೃಶರೀರಕತ್ವೇನ ಭೋಗ್ಯಭೋಗೋಪಕರಣಶರೀರಕತ್ವೇನ ಇತಿ ತ್ರಿವಿಧಂ ಪರಮಾತ್ಮೋಪಾಸನಮ್ ಆಶ್ರಿತಮ್। ಯಥಾ 'ಸತ್ಯಂ ಜ್ಞಾನಮನನ್ತಂ ಬ್ರಹ್ಮ' (ತೈ. ೨-೧) ಇತಿ ಸ್ವರೂಪೇಣ। 'ತದನುಪ್ರವಿಶ್ಯ ಸಚ್ಚ ತ್ಯಚ್ಚಾಭವತ್" ಇತ್ಯಾದಿ 'ಸತ್ಯಂ ಚಾನೃತಂ ಚ ಸತ್ಯಮಭವತ್' (ತೈ. ೨-೬) ಇತಿ ಭೋಕ್ತೃಶರೀರಕತ್ವೇನ ಭೋಗ್ಯಭೋಗೋಪಕರಣಶರೀರಕತ್ವೇನ ಚ । ಇಹಾಪಿ ತತ್ಸಂಭವಾತ್ ಏವಮ್ ಉಪದೇಶಃ ॥

(ಅರ್ಥ)

**೩೨. ಜೀವಮುಖ್ಯಪ್ರಾಣರುಗಳ ಲಿಂಗವಿರುವದರಿಂದ ಹೀಗಲ್ಲ -ಎಂದರೆ, (ಅದು) ಸರಿಯಲ್ಲ. ಏಕೆಂದರೆ ಉಪಾಸನೆಯು ಮೂರು ಬಗೆಯಾಗಿರುವದರಿಂದ (ಇದನ್ನು ಮತ್ತೊಂದು ಕಡೆಯಲ್ಲಿಯೂ) ಆಶ್ರಯಿಸಿರುತ್ತದೆ. ಇಲ್ಲಿ ಅದು ಹೊಂದುತ್ತದೆ.**

'ಮೂರು ತಲೆಗಳುಳ್ಳ ತ್ವಾಷ್ಟ್ರನನ್ನು ಕೊಂದೆನು' (ಕೌ. ೪-೧), 'ಎಲ್ಲಿಯವರೆಗೆ ಪ್ರಾಣವು ಈ ಶರೀರದಲ್ಲಿ ಇದ್ದುಕೊಂಡಿರುವದೋ ಅಲ್ಲಿಯವರೆಗೇ ಆಯುಸ್ಸು' (ಕೌ. ೩-೨) ಎಂದು ಮುಂತಾಗಿ ಜೀವನ ಲಿಂಗವೂ ಮುಖ್ಯಪ್ರಾಣದ ಲಿಂಗವೂ ಈ (ಪ್ರಕರಣ)ದಲ್ಲಿ ಕಂಡುಬರುತ್ತದೆಯಾದ್ದರಿಂದ[1] ಹೀಗೆ ಹೇಳುವದು ಸರಿಯಲ್ಲ ಎಂದರೆ-

---

1. ಪರಮಾತ್ಮನನ್ನೇ ಉಪಾಸನೆಮಾಡಬೇಕೆಂದು ಹೇಳುವದಿದ್ದರೆ ಜೀವನನ್ನೂ ಪ್ರಾಣನನ್ನೂ ಇಲ್ಲಿ ಹೇಳುತ್ತಿರಲಿಲ್ಲ- ಎಂದು ಪೂರ್ವಪಕ್ಷಿಯ ಭಾವ.

ಹಾಗಲ್ಲ. ಉಪಾಸನೆಯು ಮೂರು ಬಗೆಯಾಗಿದೆ ಎಂಬ ಕಾರಣದಿಂದ ಜೀವ (ವಾಚಕ)ಶಬ್ದದಿಂದಲೂ ಪ್ರಾಣ(ವಾಚಕ)ಶಬ್ದದಿಂದಲೂ ಪರಮಾತ್ಮನನ್ನು (ಇಲ್ಲಿ) ಹೇಳಿರುತ್ತದೆ. ಬೇರೆಯ ಕಡೆಗಳಲ್ಲಿಯೂ ಪರಮಾತ್ಮನನ್ನು ಸ್ವರೂಪದಿಂದ ಉಪಾಸನೆಮಾಡುವದು, ಭೋಕ್ತೃಗಳನ್ನು ಶರೀರವಾಗಿ ಉಳ್ಳವನೆಂದು ಉಪಾಸನೆ ಮಾಡುವದು, ಭೋಗ್ಯವಾದ ಭೋಗಗಳು, (ಅವುಗಳ) ಉಪಕರಣಗಳು- ಇವನ್ನು ಶರೀರವಾಗಿ ಉಳ್ಳವನೆಂದು ಉಪಾಸನೆಮಾಡುವದು- ಹೀಗೆ ಮೂರು ವಿಧವಾಗಿ ಪರಮಾತ್ಮನನ್ನು ಉಪಾಸನೆಮಾಡಬೇಕೆಂಬುದನ್ನು ಆಶ್ರಯಿಸಿರುತ್ತದೆ. ಹೇಗೆಂದರೆ 'ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು' (ತೈ. ೨-೧) ಎಂದು ಸ್ವರೂಪದಿಂದ, 'ಅದನ್ನು ಒಳಹೊಕ್ಕು ಸತ್ತೂ ತ್ಯತ್ತೂ ಆಯಿತು' ಎಂದು ಪ್ರಾರಂಭಿಸಿ 'ಸತ್ಯವೂ ಅನೃತವೂ ಸತ್ಯವೇ ಆಯಿತು' (ತೈ. ೨-೬) ಎಂದು ಭೋಕ್ತೃಗಳನ್ನು ಶರೀರವಾಗಿ ಉಳ್ಳದ್ದೆಂದೂ ಭೋಗ್ಯಭೋಗೋಪಕರಣಗಳನ್ನು ಶರೀರವಾಗಿ ಉಳ್ಳದ್ದೆಂದೂ (ಉಪಾಸನೆಮಾಡಬೇಕೆಂಬ ಪಕ್ಷವನ್ನು ಆಶ್ರಯಿಸಿದೆ). ಇಲ್ಲಿಯೂ ಆ (ಮೂರು ಬಗೆಯ ಉಪಾಸನೆಯು) ಆಗಬಹುದಾದ್ದರಿಂದ ಹೀಗೆ ಉಪದೇಶಮಾಡಿರುತ್ತದೆ.

(ಮೂಲ)

೩೬. 'ಜನ್ಮಾದ್ಯಸ್ಯ ಯತಃ' (೧-೧-೨) ಇತ್ಯಾದಿಷು 'ಸತ್', 'ಬ್ರಹ್ಮ', 'ಆತ್ಮಾ'- ಇತಿ ಸಾಮಾನ್ಯಶಬ್ದೈರ್ಹಿ ಜಗತ್ಕಾರಣಂ ಪ್ರಕೃತಿಪುರುಷಾಭ್ಯಾಮ್ ಅರ್ಥಾನ್ತರಭೂತಮ್ ಇತಿ ಸಾಧಿತಮ್। 'ಜ್ಯೋತಿಶ್ಚರಣಾಭಿಧಾನಾತ್' (೧-೧-೨೫) ಇತ್ಯಸ್ಮಿನ್ ಸೂತ್ರೇ ಪುರುಷಸೂಕ್ತೋದಿತೋ ಮಹಾಪುರುಷೋ ಜಗತ್ಕಾರಣಮ್ ಇತಿ ವಿಶೇಷತೋ ನಿರ್ಣೀತಮ್ । ಸ ಏವ ಪ್ರಜ್ಞಾತಜೀವವಾಚಿಭಿರಿನ್ದ್ರಾದಿಶಬ್ದೈರಪಿ ಕ್ವಚಿತ್ಕ್ವಚಿತ್ ಶಾಸ್ತ್ರದೃಷ್ಟ್ಯಾ ತತ್ತಚ್ಛರೀರಕತಯಾ ಚ ಉಪಾಸ್ಯತ್ವಾಯೋಪದಿಶ್ಯತ ಇತಿ 'ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್' (೧-೧-೩೧) ಇತಿ 'ಉಪಾಸಾತ್ರೈವಿಧ್ಯಾತ್' ಇತಿ ಸಾಧಿತಮ್ ॥೩೨॥

(ಅರ್ಥ)

'ಜನ್ಮವೇ ಮುಂತಾದದ್ದು ಈ ಪ್ರಪಂಚಕ್ಕೆ ಯಾವದರಿಂದಲೋ (ಅದು ಬ್ರಹ್ಮ)' (೧-೧-೨) ಎಂಬುದೇ ಮುಂತಾದ (ಸೂತ್ರ)ಗಳಲ್ಲಿ ಸತ್, ಬ್ರಹ್ಮ, ಆತ್ಮ- ಎಂದು ಸಾಮಾನ್ಯಶಬ್ದಗಳಿಂದಲ್ಲವೆ, ಜಗತ್ಕಾರಣವಾದದ್ದು ಪ್ರಕೃತಿಪುರುಷರುಗಳಿಗಿಂತಲೂ ಬೇರೊಂದು ವಸ್ತು ಎಂದು ಸಾಧಿಸಿದ್ದಾಗಿತ್ತು? 'ಜ್ಯೋತಿಯು (ಬ್ರಹ್ಮವು), ಏಕೆಂದರೆ ಚರಣವನ್ನು ಹೇಳಿದೆ' (೧-೧-೨೫) ಎಂಬೀ ಸೂತ್ರದಲ್ಲಿ ಪುರುಷಸೂಕ್ತದಲ್ಲಿ ಹೇಳಿರುವ ಮಹಾಪುರುಷನೇ ಜಗತ್ಕಾರಣವು ಎಂದು ವಿಶೇಷರೂಪದಿಂದ ನಿರ್ಣಯಿಸಲಾಯಿತು. ಆ (ಪರಮಪುರುಷನೇ) ಜೀವವಾಚಕಗಳೆಂದು ಗೊತ್ತಾಗಿರುವ 'ಇಂದ್ರ' ಮುಂತಾದ ಶಬ್ದಗಳಿಂದಲೂ ಒಂದೊಂದು ಕಡೆಯಲ್ಲಿ ಶಾಸ್ತ್ರದೃಷ್ಟಿ

ಯಿಂದ ಆಯಾ(ಜೀವಾದಿಗಳನ್ನು) ಶರೀರವುಳ್ಳವನಾಗಿರುವದರಿಂದ ಉಪಾಸನೆಗಾಗಿ ಉಪದಿಷ್ಟನಾಗಿರುತ್ತಾನೆ ಎಂಬುದನ್ನು 'ಆದರೆ ಉಪದೇಶವು ಶಾಸ್ತ್ರದೃಷ್ಟಿಯಿಂದ, ವಾಮದೇವನಂತೆ' (೧-೧-೩೧), 'ಉಪಾಸನೆಯು ಮೂರು ಬಗೆಯಾಗಿರುವದರಿಂದ' (೧-೧-೩೨) ಎಂಬ (ಸೂತ್ರಗಳಿಂದ) ಸಾಧಿಸಿಕೊಟ್ಟಿರುತ್ತದೆ. ॥೩೨॥

ಇತಿ ಶ್ರೀ ಭಗವದ್ರಾಮಾನುಜವಿರಚಿತೇ ವೇದಾನ್ತಸಾರೇ
ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ

---

# ಒಂದನೆಯ ಅಧ್ಯಾಯ-ಎರಡನೆಯ ಪಾದ

## ಸರ್ವತ್ರಪ್ರಸಿದ್ಧ್ಯಧಿಕರಣ

### ೩೩. ಸರ್ವತ್ರ ಪ್ರಸಿದ್ಧೋಪದೇಶಾತ್ (೧-೨-೧)

(ಮೂಲ)

೩೭. 'ಸರ್ವಂ ಖಲ್ವಿದಮ್' (ಛಾಂ. ೩-೧೪-೧) ಇತಿ ನಿರ್ದಿಷ್ಟೇನ ಸಾಮಾನಾಧಿಕರಣ್ಯೇನ ನಿರ್ದಿಷ್ಟಂ ಬ್ರಹ್ಮ ಪರಮಾತ್ಮಾ। ಕುತಃ ? ಪ್ರಸಿದ್ಧೋಪದೇಶಾತ್। ತಜ್ಜಲಾನ್ ಇತಿ ಹೇತುತಃ ಸರ್ವಾತ್ಮಕತ್ವೋಪದೇಶಾತ್ ಇತ್ಯರ್ಥಃ। ಪ್ರಸಿದ್ಧಂ ಹಿ ಹೇತುತಯಾ ವ್ಯಪದಿಶ್ಯತೇ। ಸಕಲೋಪನಿಷತ್ಸು ಬ್ರಹ್ಮೈವ ಹಿ ಜಗಜ್ಜನ್ಮಲಯಜೀವನಹೇತುತಯಾ ಪ್ರಸಿದ್ಧಂ 'ಯತೋ ವಾ ಇಮಾನಿ' (ತೈ. ೩-೧) ಇತ್ಯಾದಿಷು ॥

(ಅರ್ಥ)

**೩೩. ಸರ್ವವೂ (ಬ್ರಹ್ಮವು) ಎಂಬಲ್ಲಿ (ಹೇಳಿರುವದು ಪರಮಾತ್ಮನೇ), ಏಕೆಂದರೆ ಪ್ರಸಿದ್ಧವಾದದ್ದನ್ನು ಉಪದೇಶಿಸಿರುತ್ತದೆ.**

'ಇದೆಲ್ಲವೂ' (ಛಾಂ. ೩-೧೪-೧) ಎಂದು ಹೇಳಿರುವದಕ್ಕೆ ಸಮಾನಾಧಿಕರಣವಾಗಿ ತಿಳಿಸಿರುವ ಬ್ರಹ್ಮವು ಪರಮಾತ್ಮನೇ. ಏಕೆಂದರೆ ಪ್ರಸಿದ್ಧವಾದದ್ದನ್ನು ಉಪದೇಶಿಸಿರುತ್ತದೆ; ತಜ್ಜಲಾನ್ (ಅದರಿಂದ ಹುಟ್ಟಿ ಅದರಲ್ಲಿ ಲಯವಾಗಿ ಅದರಿಂದ ಜೀವಿಸಿರುವದು) ಎಂಬ ಹೇತುವಿನಿಂದ ಸರ್ವಕ್ಕೂ ಆತ್ಮನೆಂದು ತಿಳಿಸಿಕೊಟ್ಟಿರುವದರಿಂದ ಎಂದರ್ಥ. ಪ್ರಸಿದ್ಧವಾದದ್ದನ್ನಲ್ಲವೆ, ಹೇತುವೆಂದು ಹೇಳುತ್ತಾರೆ? ಸಕಲೋಪನಿಷತ್ತುಗಳಲ್ಲಿಯೂ- 'ಯಾವದರಿಂದ ಈ ಭೂತಗಳು ಹುಟ್ಟುತ್ತವೆಯೋ' (ತೈ. ೩-೧) ಮುಂತಾದ ಶ್ರುತಿಗಳಲ್ಲೆಲ್ಲ- ಬ್ರಹ್ಮವೇ ಅಲ್ಲವೆ, ಜಗತ್ತಿನ ಜನ್ಮ, ಲಯ, ಬಾಳು- ಇವಕ್ಕೆ ಹೇತುವೆಂದು ಪ್ರಸಿದ್ಧವಾಗಿದೆ ?

### ೩೪. ವಿವಕ್ಷಿತಗುಣೋಪಪತ್ತೇಶ್ಚ (೧-೨-೨)

(ಮೂಲ)

೩೮. ಮನೋಮಯತ್ವಸತ್ಯಸಙ್ಕಲ್ಪತ್ವಾದಯೋ ವಿವಕ್ಷಿತಗುಣಾಃ ಬ್ರಹ್ಮಣ್ಯೇವೋಪಪದ್ಯನ್ತೇ ॥

(ಅರ್ಥ)

**೩೪. ವಿವಕ್ಷಿತವಾದ ಗುಣಗಳು ಹೊಂದುವದರಿಂದಲೂ (ಇದು ಬ್ರಹ್ಮವೇ).**

ಮನೋಮಯತ್ವ. ಸತ್ಯಸಂಕಲ್ಪತ್ವ- ಎಂದು ಮುಂತಾಗಿ[1] (ಇಲ್ಲಿ) ಹೇಳ ಹೊರಟಿರುವ ಗುಣಗಳು ಬ್ರಹ್ಮಕ್ಕೇ ಹೊಂದುತ್ತವೆ.

## ೩೫. ಅನುಪಪತ್ತೇಸ್ತು ನ ಶಾರೀರಃ (೧-೨-೩)

(ಮೂಲ)

೩೯. ದುಃಖಮಿಶ್ರಪರಿಮಿತಸುಖಲವಭಾಗಿನಿ ಶಾರೀರೇ ತು ಏಷಾಂ ಗುಣಾನಾಮ್ ಅನುಪಪತ್ತೇಃ ನ ಶಾರೀರೋಽಯಮ್ ॥

(ಅರ್ಥ)

**೩೫. ಆದರೆ ಹೊಂದದೆ ಇರುವದರಿಂದ ಶಾರೀರನಲ್ಲ.**

ದುಃಖವು ಬೆರೆತಿರುವ ಅಳತೆಯ ಸುಖಲೇಶವನ್ನು ಮಾತ್ರ ಹೊಂದುವ ಶಾರೀರನಲ್ಲಿ[2] ಈ ಗುಣಗಳು ಹೊಂದುವದಿಲ್ಲವಾಗಿ ಈ (ಬ್ರಹ್ಮವು) ಶಾರೀರನಲ್ಲ.

## ೩೬. ಕರ್ಮಕರ್ತೃವ್ಯಪದೇಶಾಚ್ಚ (೧-೨-೪)

(ಮೂಲ)

೪೦. 'ಏತಮಿತಃ ಪ್ರೇತ್ಯಾಭಿಸಂಭವಿತಾಸ್ಮಿ' (ಛಾಂ. ೩-೧೪-೪) ಇತ್ಯಭಿಸಂಭಾವ್ಯಾಭಿಸಂಭವಿತೃತ್ವೇನ ಪ್ರಸ್ತುತಬ್ರಹ್ಮಜೀವಯೋರ್ವ್ಯಪದೇಶಾತ್ ಅಭಿಸಂಭಾವ್ಯಂ ಬ್ರಹ್ಮ ಜೀವಾದರ್ಥಾನ್ತರಮ್ ॥

(ಅರ್ಥ)

**೩೬. ಕರ್ಮವಾಗಿಯೂ ಕರ್ತೃವಾಗಿಯೂ ಹೇಳಿರುವದರಿಂದಲೂ (ಅದು ಬೇರೆ).**

'ಈತನನ್ನು ಇಲ್ಲಿಂದ ಹೋದಮೇಲೆ ಸೇರುವವನಾಗಿರುವೆನು' (ಛಾಂ. ೩-೧೪-೪) ಎಂದು ಸೇರಲ್ಪಡತಕ್ಕವನು, ಸೇರುವವನು- ಎಂದು ಪ್ರಕೃತರಾಗಿರುವ ಬ್ರಹ್ಮಜೀವರುಗಳನ್ನು (ಬೇರೆಬೇರೆಯಾಗಿ) ಹೇಳಿರುವದರಿಂದ ಸೇರಲ್ಪಡಬೇಕಾದ ಬ್ರಹ್ಮವು ಜೀವನಿಗಿಂತ ಬೇರೆಯಾದ ವಸ್ತು.

## ೩೭. ಶಬ್ದವಿಶೇಷಾತ್ (೧-೨-೫)

(ಮೂಲ)

೪೧. 'ಏಷ ಮ ಆತ್ಮಾಽನ್ತರ್ಹೃದಯೇ' (ಛಾಂ. ೩-೧೪-೪) ಇತಿ ಷಷ್ಠ್ಯಾ ಪ್ರಥಮಯಾ ಚ ಜೀವೋ ಬ್ರಹ್ಮ ಚ ವ್ಯಪದಿಶ್ಯತೇ। ತತಶ್ಚಾರ್ಥಾನ್ತರಮ್ ॥

---

1. ಇಲ್ಲಿ ಮನೋಮಯ (ಶುದ್ಧಮನಸ್ಸಿಗೆ ನಿಲುಕುವವನು), ಪ್ರಾಣಶರೀರ (ಪ್ರಾಣವು ಶರೀರವಾಗಿ ಉಳ್ಳವನು), ಭಾರೂಪ (ಪ್ರಕಾಶಸ್ವರೂಪನು). ಸತ್ಯಸಂಕಲ್ಪನು, ಆಕಾಶಾತ್ಮ, ಸರ್ವಕರ್ಮ, ಸರ್ವಕಾಮ, ಸರ್ವಗಂಧ, ಸರ್ವರಸ- ಮುಂತಾದ ಗುಣಗಳನ್ನು ಹೇಳಿವೆ.

2. ಜೀವನಲ್ಲಿ.

(ಅರ್ಥ)

**೩೭. ಬೇರೆಬೇರೆಯ ಶಬ್ದಗಳಿರುವದರಿಂದಲೂ.**

'ಈತನು ಹೃದಯದೊಳಗಿರುವ ನನ್ನ ಆತ್ಮನು' (ಛಾಂ. ೩-೧೪-೪) ಎಂದು (ಜೀವನನ್ನು) ಷಷ್ಠೀವಿಭಕ್ತಿಯಿಂದಲೂ (ಬ್ರಹ್ಮವನ್ನು) ಪ್ರಥಮಾವಿಭಕ್ತಿಯಿಂದಲೂ[1] ಜೀವಬ್ರಹ್ಮರುಗಳನ್ನು (ಬೇರೆಬೇರೆಯಾಗಿ) ಹೇಳಿರುತ್ತದೆ. ಆದ್ದರಿಂದಲೂ (ಇದು ಜೀವನಿಗಿಂತ) ಬೇರೆಯಾದ ವಸ್ತು.

## ೩೮. ಸ್ಮೃತೇಶ್ಚ (೧-೨-೬)

(ಮೂಲ)

೪೫. ಅತ್ರಾಪಿ ಪ್ರಥಮಯಾ ನಿರ್ದಿಷ್ಟಃ ಪುರುಷೋತ್ತಮ ಇತಿ ನಿಶ್ಚೀಯತೇ। 'ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟಃ'(ಗೀ. ೧೫-೧೫) ಇತಿ ಹಿ ಸ್ಮೃತಿಃ।

(ಅರ್ಥ)

**೩೮. ಸ್ಮೃತಿಯಿಂದಲೂ (ಹೀಗೆ).**

(ಸ್ಮೃತಿಯ ಪ್ರಮಾಣದಿಂದ) ಇಲ್ಲಿಯೂ ಪ್ರಥಮಾವಿಭಕ್ತಿಯಿಂದ ಆತ್ಮನು ಎಂದು) ಹೇಳಿರುವವನು ಪುರುಷೋತ್ತಮನೇ ಎಂದು ನಿಶ್ಚಯವಾಗುತ್ತದೆ. 'ಪ್ರತಿಯೊಬ್ಬನ ಹೃದಯದಲ್ಲಿಯೂ ನಾನು ಇದ್ದುಕೊಂಡಿರುವೆನು' (ಗೀ.೧೫-೧೫) ಎಂದಲ್ಲವೆ, ಸ್ಮೃತಿ ?

## ೩೯. ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ (೧-೨-೭)

(ಮೂಲ)

೪೬. 'ಏಷ ಮ ಆತ್ಮಾಽನ್ತರ್ಹೃದಯೇಽಣೀಯಾನ್ ವ್ರೀಹೇಃ' (ಛಾಂ. ೩-೧೪-೩) ಇತ್ಯಾದಿನಾ ಅಲ್ಪಾಯತನತ್ವಾತ್, ಸ್ವರೂಪಾಲ್ಪತ್ವಸ್ಯ ವ್ಯಪದೇಶಾಚ್ಚ ನಾಯಂ ಪರ ಇತಿ ಚೇತ್। ನ। ಉಪಾಸ್ಯತ್ವಾದ್ಧೇತೋಸ್ತಥಾ ವ್ಯಪದೇಶಃ। ನ ತು ಸ್ವರೂಪಾಲ್ಪತ್ವೇನ। ವ್ಯೋಮವತ್। ಸ್ವರೂಪಮಹತ್ತ್ವಂ ಚ ಅತ್ರೈವ ವ್ಯಪದಿಶ್ಯತೇ 'ಜ್ಯಾಯಾನ್ ಪೃಥಿವ್ಯಾ ಜ್ಯಾಯಾನನ್ತರಿಕ್ಷಾತ್' (ಛಾಂ. ೩-೧೪-೩) ಇತ್ಯಾದಿನಾ ||

(ಅರ್ಥ)

**೩೯. ಸಣ್ಣ ಸ್ಥಾನ(ವನ್ನು ಹೇಳಿರು)ವದರಿಂದಲೂ, ಅದನ್ನು ಹೇಳಿರುವದರಿಂದಲೂ ಹೀಗಲ್ಲ ಎಂದರೆ ಹಾಗಲ್ಲ. ಕಂಡುಕೊಳ್ಳಬೇಕಾಗಿರುವದರಿಂದ ಹೀಗೆ; ಆಕಾಶದಂತೆಯೂ (ಹೇಳಿದೆ).**

---

1. ನನ್ನ (ಷಷ್ಠೀವಿಭಕ್ತಿ) ಆತ್ಮನು (ಪ್ರಥಮಾವಿಭಕ್ತಿ)- ಹೀಗೆ ಬೇರೆಬೇರೆಯ ವಿಭಕ್ತಿಗಳಿಂದ ಹೇಳಿರುವದು ಒಬ್ಬನೇ ಎನ್ನುವದಕ್ಕೆ ಬರುವದಿಲ್ಲ.

'ಈ ನನ್ನ ಆತ್ಮನು, ಹೃದಯದೊಳಗೆ, ಭತ್ತದಕಾಳಿಗಿಂತಲೂ ಅಣುತರನಾಗಿ' (ಛಾಂ. ೩-೧೪-೩) ಎಂದು ಮುಂತಾಗಿರುವ ವಾಕ್ಯದಿಂದ ಅಲ್ಪವಾದ ಸ್ಥಾನವನ್ನು ಹೇಳಿರುವದರಿಂದಲೂ ಸ್ವರೂಪದಿಂದಲೂ ಅಲ್ಪತ್ವವನ್ನು ಹೇಳಿರುವದರಿಂದಲೂ[1] ಇವನು ಪರಮಾತ್ಮನಲ್ಲ ಎಂದರೆ—

ಹಾಗಲ್ಲ. ಏಕೆಂದರೆ ಉಪಾಸನೆಮಾಡಲೆಂದು ಹಾಗೆ ಹೇಳಿದೆಯೇ ಹೊರತು ಸ್ವರೂಪವೇ ಅಲ್ಪವೆಂದು (ಹೇಳಿಲ್ಲ). ಆಕಾಶದಂತೆ, ಸ್ವರೂಪವು ಹೆಚ್ಚಿನದೆಂಬುದನ್ನು 'ಪೃಥಿವಿಗಿಂತಲೂ ದೊಡ್ಡವನು, ಆಕಾಶಕ್ಕಿಂತಲೂ ದೊಡ್ಡವನು' ಎಂದು ಮುಂತಾದ (ವಾಕ್ಯದಿಂದ) ಇಲ್ಲಿಯೇ ಹೇಳಿರುತ್ತದೆ.

### ೪೦. ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ (೧-೨-೮)

(ಮೂಲ)

೪೭. ಪರೋಽಪಿ ಅನ್ತಃ ಶರೀರೇ ವಸತಿ ಚೇತ್ ಜೀವವತ್ ಸುಖದುಃಖೋಪಭೋಗಪ್ರಾಪ್ತಿಃ ಸ್ಯಾದಿತಿ ಚೇತ್ । ನ । ಹೇತುವೈಶೇಷ್ಯಾತ್ । ಪರಸ್ಯ ಹಿ ಛನ್ದತೋ ಜೀವರಕ್ಷಾಯೈ ಶರೀರಾನ್ತರ್ವಾಸಃ ॥ ೮ ॥

(ಅರ್ಥ)

**೪೦. ಸಂಭೋಗವು ಪ್ರಾಪ್ತವಾಗುವದು. ಎಂದರೆ ಹಾಗಲ್ಲ ; ಏಕೆಂದರೆ ವೈಶೇಷ್ಯವಿದೆ.**

ಪರಮಾತ್ಮನೂ ಶರೀರದೊಳಗೇ ಇರುತ್ತಾನಾದರೆ ಜೀವನಂತೆ ಸುಖದುಃಖಗಳನ್ನು ಉಪಭೋಗಿಸುವನೆಂದು ಬಂದೊದಗುವದಲ್ಲ ಎಂದರೆ–

ಹಾಗಲ್ಲ. ಏಕೆಂದರೆ ವಿಶೇಷವಾದ ಹೇತುವಿದೆ. ಪರಮಾತ್ಮನು ಜೀವನನ್ನು ರಕ್ಷಿಸುವದಕ್ಕಾಗಿ ತನ್ನ ಇಚ್ಛೆಯಿಂದಲೇ ಅಲ್ಲವೆ, ಶರೀರದೊಳಗಡೆ ವಾಸಿಸುತ್ತಿದಾನೆ ?

## ಅತ್ರಧಿಕರಣ

### ೪೧. ಅತ್ತಾ ಚರಾಚರಗ್ರಹಣಾತ್ (೧-೨-೯)

(ಮೂಲ)

೪೮. 'ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ । ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ' (ಕ. ೧-೨-೨೫), ಇತ್ಯತ್ರ ಓದನೋಪಸೇಚನಸೂಚಿತೋಽತ್ತಾ ಪರಮಪುರುಷಃ । ಬ್ರಹ್ಮಕ್ಷತ್ರೋಪಲಕ್ಷಿತಸ್ಯ ಚರಾಚರಸ್ಯ ಕೃತ್ಸ್ನಸ್ಯ ಮೃತ್ಯೂಪಸೇಚನತ್ವೇನ ಅದನೀಯತಯಾ ಗ್ರಹಣಾತ್ ॥

1. 'ಹೃದಯದೊಳಗೆ' ಎಂದಿರುವದು ಅಲ್ಪಸ್ಥಾನ, ಭತ್ತದಕಾಳಿಗಿಂತ ಸಣ್ಣವನು ಎಂದಿರುವದು ಸ್ವರೂಪಾಲ್ಪತ್ವ.

(ಅರ್ಥ)

**೪೧. ಅತ್ತೃವು (ಪರಮಾತ್ಮನೇ); ಏಕೆಂದರೆ ಚರಾಚರಗ್ರಹಣ ವಿದೆ.**

'ಯಾವನಿಗೆ ಬ್ರಾಹ್ಮಣವರ್ಣವೂ ಕ್ಷತ್ರಿಯವರ್ಣವೂ ಎರಡೂ ಅನ್ನವಾಗಿರುವವೋ ಮೃತ್ಯುವು ಯಾವನಿಗೆ ಉಪ್ಪಿನಕಾಯಿಯೋ ಅವನು ಎಲ್ಲಿರುವನೋ ಅದನ್ನು ಹೀಗೆಂದು ಯಾವನು ಬಲ್ಲನು?' (ಕ. ೧-೨-೨೫) ಎಂಬಲ್ಲಿ ಅನ್ನ ಮತ್ತು ಉಪ್ಪಿನಕಾಯಿ- ಇವುಗಳಿಂದ ಸೂಚಿತನಾಗಿರುವ ಅತ್ತೃವು (ತಿನ್ನುವಾತನು) ಪರಮಪುರುಷನೇ, ಏಕೆಂದರೆ ಬ್ರಹ್ಮ, ಕ್ಷತ್ರ-ಇವುಗಳನ್ನು ಉಪಲಕ್ಷಣವಾಗಿ ಹೇಳಿರುವ ಚರಾಚರರೂಪವಾದ ಇಡಿಯ (ಜಗತ್ತನ್ನು) ಮೃತ್ಯುವೆಂಬ ಉಪಸೇಚನವುಳ್ಳದ್ದಾಗಿ ತಿನ್ನಲ್ಪಡತಕ್ಕದ್ದು ಎಂದು (ಇಲ್ಲಿ) ಹಿಡಿದು ಹೇಳಿದೆ[1]. ॥ ೯ ॥

## ೪೨. ಪ್ರಕರಣಾಚ್ಚ (೧-೨-೧೦)

(ಮೂಲ)

೪೯. 'ಮಹಾನ್ತಂ ವಿಭುಮಾತ್ಮನಂ ಮತ್ವಾ ಧೀರೋ ನ ಶೋಚತಿ' (ಕ. ೧-೨-೨೨), 'ನಾಯಮಾತ್ಮಾ ಪ್ರವಚನೇನ ಲಭ್ಯಃ' (ಕ. ೧-೨-೨೩) ಇತ್ಯಾದಿನಾ ಪರಸ್ಯೈವ ಪ್ರಕೃತತ್ವಾತ್ ಸ ಏವಾಯಮ್ ॥ ೧೦ ॥

(ಅರ್ಥ)

**೪೨. ಪ್ರಕರಣದಿಂದಲೂ (ಹೀಗೆ).**

'ಮಹಾಂತನೂ[2] ವಿಭುವೂ[3] ಆದ ಆತ್ಮನನ್ನು ಅರಿತುಕೊಂಡ ಧೀರನು ಶೋಕಿಸುವದಿಲ್ಲ' (ಕ. ೧-೨-೨೨), 'ಈ ಆತ್ಮನು ಪ್ರವಚನದಿಂದ[4] ಸಿಕ್ಕುವವನಲ್ಲ' (ಕ. ೧-೨-೨೩)- ಎಂದು ಮುಂತಾಗಿರುವ (ವಾಕ್ಯ)ದಿಂದ ಪರಮಾತ್ಮನೇ ಇಲ್ಲಿ ಪ್ರಕೃತನಾಗಿರುತ್ತಾನಾದ್ದರಿಂದ ಅವನೇ ಈ (ಅತ್ತೃ). ॥ ೧೦ ॥

---

1. ಉಪಸೇಚನ, ಉಪ್ಪಿನಕಾಯಿಯೆಂಬುದು ತಾನು ತಿನ್ನಲ್ಪಟ್ಟು ಮತ್ತೊಂದನ್ನು ತಿನ್ನುವದಕ್ಕೆ ಕಾರಣವಾಗಿರತಕ್ಕದ್ದು ; ಆದ್ದರಿಂದ ಮೃತ್ಯುವು ಉಪ್ಪಿನಕಾಯಿಯಾದ್ದರಿಂದ ಇಲ್ಲಿ ಬ್ರಹ್ಮಕ್ಷತ್ರಾದಿಚರಾಚರಜಗತ್ತೇ ಅನ್ನವು ಎಂದಾಯಿತು. ಆದ್ದರಿಂದ ಜಗತ್ಸಂಹಾರಕರ್ತೃವಾದ ಪರಮಾತ್ಮನೇ ಇಲ್ಲಿ ಹೇಳಿರುವ ಅತ್ತೃ, ಜೀವನಲ್ಲ.

2. ಪ್ರಸಿದ್ಧ ವೈಭವಶಾಲಿಯೂ, ಎಂದು ರಂ. ರಾ.

3. ವ್ಯಾಪಿಯೂ.

4. ಪ್ರವಚನವೆಂದರೆ ಇಲ್ಲಿ ಮನನವು ಎಂದು ರಂ. ರಾ.

## ೪೩. ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್

(೧–೨–೧೧)

(ಮೂಲ)

೫೦. ಅನನ್ತರಂ 'ಋತಂ ಪಿಬನ್ತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧ್ಯೇ' (ಕ. ೧–೩–೧) ಇತ್ಯಾದಿನಾ ಜೀವಪರಮಾತ್ಮಾನಾವೇವ ಪ್ರಯೋಜ್ಯಪ್ರಯೋಜಕಭಾವೇನ ಕರ್ಮಫಲಾಶನೇಽನ್ವಯಾದುಪದಿಷ್ಟೌ । ತಯೋರೇವ ಅಸ್ಮಿನ್ ಪ್ರಕರಣೇ ಗುಹಾಪ್ರವೇಶದರ್ಶನಾತ್ । 'ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ ಗುಹಾಹಿತಮ್' (ಕಂ. ೧–೨–೧೨) ಇತಿ ಪರಸ್ಯ। 'ಯಾ ಪ್ರಾಣೇವ ಸಂಭವತ್ಯದಿತಿರ್ದೇವತಾಮಯೀ। ಗುಹಾಂ ಪ್ರವಿಶ್ಯ ತಿಷ್ಠನ್ತೀ ...' (ಕ. ೨–೧–೭) ಇತಿ ಜೀವಸ್ಯ। ಕರ್ಮಫಲಾದನಾತ್ ಅದಿತಿರ್ಜೀವಃ ॥ ೧೧ ॥

(ಅರ್ಥ)

**೪೩. ಗುಹೆಯಲ್ಲಿ ಪ್ರವಿಷ್ಟರಾದವರು ಆತ್ಮರುಗಳೇ ; ಏಕೆಂದರೆ ಅದು ಕಂಡುಬಂದಿದೆ.**

ಇದಾದಮೇಲೆ 'ಸತ್ಯವಾದ (ಕರ್ಮಫಲವನ್ನು) ಅನುಭವಿಸುತ್ತಿರುವ, ಸುಕೃತದಿಂದ ಸಿಕ್ಕಬೇಕಾದ ಲೋಕದಲ್ಲಿರುವ, (ಹೃದಯ)ಗುಹೆಯನ್ನು ಹೊಕ್ಕಿರುವ, ಪರಮವಾದ ಉತ್ಕೃಷ್ಟವಾದ (ಹೃದಯಕಾಶದಲ್ಲಿ) ಇರುವ' (ಕ. ೧–೩–೧) ಎಂದು ಜೀವಪರಮಾತ್ಮರನ್ನೇ ಪ್ರಯೋಜ್ಯಪ್ರಯೋಜಕಭಾವಸಂಬಂಧದಿಂದ[1] ಕರ್ಮಫಲಭೋಗದಲ್ಲಿ ಅನ್ವಯವಾಗುವದರಿಂದ – ಉಪದೇಶಿಸಿರುತ್ತದೆ. ಅವರಿಬ್ಬರೇ ಈ ಪ್ರಕರಣದಲ್ಲಿ ಏಕೆಂದರೆ ಗುಹೆಯಲ್ಲಿ ಪ್ರವೇಶಮಾಡಿರುತ್ತಾರೆಂದು (ಈ ಶ್ರುತಿಯಲ್ಲಿ) ಕಂಡುಬಂದಿರುತ್ತದೆ. (ಹೇಗೆಂದರೆ) 'ನೋಡುವದಕ್ಕೆ ಕಷ್ಟವಾಗಿರುವವನೂ ಗೂಢವಾಗಿರುವವನೂ[2], (ಸರ್ವಭೂತಗಳಲ್ಲಿ) ಹೊಕ್ಕಿರುವವನೂ, ಗುಹೆಯಲ್ಲಿರುವವನೂ....' (ಕ. ೧–೨–೧೨) ಎಂದು ಪರಮಾತ್ಮನನ್ನು (ಹೇಳಿದೆ) ; 'ದೇವತಾಮಯಿಯಾದ[3] ಯಾವ ಅದಿತಿಯು ಪ್ರಾಣನ

---

1. ಋತವೆಂದರೆ ಸತ್ಯವಾಗಿ, ಅವಶ್ಯವಾಗಿ ಅಗುವ ಕರ್ಮಫಲವು. ಅದನ್ನು ಜೀವನೇ ಅನುಭವಿಸುವನಾದರೂ ಈಶ್ವರನ ಸಂಕಲ್ಪದಂತೆ ಜೀವನು ಅದನ್ನು ಅನುಭವಿಸುತವರಿಂದ ಪರಮಾತ್ಮನನ್ನು ಪಿಬನ್ತೌ (ಅನುಭವಿಸುತ್ತಿರುವ) ಎಂದಿದೆ. ಸರ್ವವ್ಯಾಪಕನಾದ್ದರಿಂದ ಪರಮಾತ್ಮನೂ ಪುಣ್ಯಫಲವಾದ ಲೋಕದಲ್ಲಿರುತ್ತಾನೆ– ಎಂದಿದೆ ಎಂದು ರಂ. ರಾ.

2. ಕರ್ಮರೂಪಾವಿದ್ಯೆಯಿಂದ ಮರೆಯಾಗಿರುವವನು –ಎಂದು ರಂ. ರಾ.

3. 'ಇಂದ್ರಿಯಗಳಿಗೆ ಅಧೀನವಾಗಿರುವ ಭೋಗವುಳ್ಳ'—ರಂ. ರಾ.

ಜೊತೆಯಲ್ಲಿರುತ್ತದೆಯೋ, ಗುಹೆಯನ್ನು ಹೊಕ್ಕಿರುವದೋ....' (ಕ. ೨-೧-೭) ಎಂದು ಜೀವನನ್ನು (ಹೇಳಿದೆ). ಕರ್ಮಫಲವನ್ನು ತಿನ್ನುವದರಿಂದ (ಅದನಾತ್) ಜೀವನು ಅದಿತಿಯು (ಎಂದು ಆ ಮಂತ್ರದಲ್ಲಿ ಹೇಳಿದೆ). ॥ ೧೧ ॥

## ೪೪. ವಿಶೇಷಣಾಚ್ಚ (೧-೨-೧೨)

(ಮೂಲ)

೫೧. ಜೀವಪರಾವೇವ ಹಿ ಸರ್ವತ್ರ ಅಸ್ಮಿನ್ ಪ್ರಕರಣೇ ವಿಶೇಷ್ಯೇತೇ । 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' (ಕ. ೧-೨-೧೮) ಇತ್ಯಾದೌ ಜೀವಃ । 'ಅಣೋರಣೀಯಾನ್ ಮಹತೋ ಮಹೀಯಾನ್' (ಕ. ೧-೨-೨೦), 'ಮಹಾನ್ತಂ ವಿಭುಮಾತ್ಮಾನಮ್' (ಕ. ೧-೨-೨೨), 'ನಾಯಮಾತ್ಮಾ ಪ್ರವಚನೇನ' (ಕ. ೧-೨-೨೩), 'ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ನರಃ । ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್' (ಕ. ೧-೩-೯) ಇತ್ಯಾದಿಷು ಪರಃ ॥

(ಅರ್ಥ)

### ೪೪. ವಿಶೇಷಣದಿಂದ ಹೇಳಿರುವದರಿಂದಲೂ (ಹೀಗೆ).

ಈ ಪ್ರಕರಣದಲ್ಲಿ ಜೀವಪರಮಾತ್ಮರುಗಳನ್ನೇ ಸವಿಶೇಷಣವಾಗಿ[1] ಹೇಳಿದೆ. (ಹೇಗೆಂದರೆ), 'ತಿಳಿದವನು ಹುಟ್ಟುವದಿಲ್ಲ, ಸಾಯುವದೂ ಇಲ್ಲ' (ಕ. ೧-೨-೧೮) ಮುಂತಾದ ಕಡೆಯಲ್ಲಿ ಜೀವನನ್ನು (ಹೇಳಿದೆ). 'ಅಣುವಿಗಿಂತಲೂ ಅಣುವೂ ಮಹತ್ತಿಗಿಂತಲೂ ದೊಡ್ಡವನೂ.....' (ಕ. ೧-೨-೨೦), 'ಮಹಾಂತನೂ[2] ವಿಭುವೂ ಆದ ಆತ್ಮನನ್ನು....' (ಕ. ೧-೨-೨೨), 'ಈ ಆತ್ಮನು ಪ್ರವಚನದಿಂದ[2] ದೊರಕುವವನಲ್ಲ. 'ಯಾವ ಮನುಷ್ಯನು ವಿಜ್ಞಾನವೆಂಬ ಸಾರಥಿಯುಳ್ಳವನಾಗಿ ಮನಸ್ಸೆಂಬ ಕಡಿವಾಣವುಳ್ಳವನಾಗಿರುವನೋ ಅವನು ದಾರಿಯ ಕೊನೆಯಾದ ಆ ವಿಷ್ಣುವಿನ ಪರಮಪದವನ್ನು ಪಡೆದುಕೊಳ್ಳುವನು' (ಕ. ೧-೩-೯) ಮುಂತಾದವುಗಳಲ್ಲಿ ಪರಮಾತ್ಮನನ್ನು ಹೇಳಿದೆ. ॥ ೧೨ ॥

(ಮೂಲ)

೫೨. 'ತ್ರಿಪಾದಸ್ಯಾಮೃತಂ ದಿವಿ' (ತೈ.ಆ. ೩-೧೨-೩೩). 'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನುತ್ತಮೇಷೂತ್ತಮೇಷು ಲೋಕೇಷು' (ಛಾಂ. ೩-೧೩-೭) ಇತಿ ವಿಶ್ವತಃ ಪ್ರಾಕ್ಪ

---

1. ಜೀವನು ಉಪಾಸಕನು, ಪರಮಾತ್ಮನು ಉಪಾಸ್ಯನು; ಜೀವನು ಪಡೆಯತಕ್ಕವನು, ಪರಮಾತ್ಮನು ಪ್ರಾಪ್ಯನು- ಎಂಬುವನ್ನು ವಿಂಗಡಿಸಿ ಹೇಳಿದೆ ಎಂದರ್ಥ.

2. ೬೪ನೆಯ ಪುಟದ 2, 4ನೆಯ ಟಿಪ್ಪಣಿಗಳನ್ನು ನೋಡಿ.

ತಾತ್ ಸ್ಥಾನಾತ್ ಪರಂ ವಿಷ್ಣೋಃ ಪರಸ್ಥಾನಮೇವ ಹಿ ಸಂಸಾರಾಧ್ವನಃ ಪಾರಭೂತಂ ಮುಮುಕ್ಷುಭಿಃ ಪ್ರಾಪ್ಯಮ್। 'ಪರಮಂ ಪದಂ ಸದಾ ಪಶ್ಯನ್ತಿ ಸೂರಯಃ' (ಸು. ೬), 'ತದಕ್ಷರೇ ಪರಮೇ ವ್ಯೋಮನ್' (ತೈ. ನಾ. ೧-೧), 'ಕ್ಷಯನ್ತಮಸ್ಯ ರಜಸಃ ಪರಾಕೇ' (ಸಾಮ. ಉತ್ತರ. ೧೭-೨-೨), 'ವಿಶ್ವಂ ಪುರಾಣಂ ತಮಸಃ ಪರಸ್ತಾತ್' (ತೈ. ನಾ. ೧-೧), 'ತೇ ಹ ನಾಕಂ ಮಹಿಮಾನಃ ಸಚನ್ತೇ। ಯತ್ರ ಪೂರ್ವೇ ಸಾಧ್ಯಾಃ ಸನ್ತಿ ದೇವಾಃ' (ತೈ.ಆ. ೩-೧೨-೩೮)- ಇತ್ಯಾದಿಸಕಲೋಪನಿಷತ್ಪ್ರಸಿದ್ಧಮ್ ॥ ೧೨ ॥

(ಅರ್ಥ)

'ಈತನ ಅಮೃತವಾದ ಮೂರು ಪಾದಗಳು ದ್ಯುಲೋಕದಲ್ಲಿ' (ತೈ. ಆ. ೩-೧೨-೩೩), 'ದ್ಯುಲೋಕದ ಆಚೆ ವಿಶ್ವದ ಮೇಲಿರುವ, ಸರ್ವಕ್ಕೂ ಮೇಲಿರುವ, ತನಗಿಂತ ಉತ್ತಮವೆಂಬುದಿಲ್ಲದ ಉತ್ತಮಲೋಕಗಳಲ್ಲಿ ಯಾವ ಜ್ಯೋತಿಯು ಬೆಳಗುತ್ತಿರುವದೋ' (ಛಾಂ. ೩-೧೩-೭) ಎಂದಿರುವದರಿಂದ ಪ್ರಾಕೃತವಾದ[1] ಎಲ್ಲಾ ಸ್ಥಾನಕ್ಕಿಂತಲೂ ಆಚೆಯಿರುವ ಹೆಚ್ಚಿನ ಸ್ಥಾನವಲ್ಲವೆ, ಸಂಸಾರದ ದಾರಿಗೆ ಕೊನೆಯಲ್ಲಿರುವದಾಗಿ ಮುಮುಕ್ಷುಗಳಿಗೆ ಪ್ರಾಪ್ಯವಾಗಿರುವದು? '(ಆ) ಪರಮಪದವನ್ನು ಸೂರಿಗಳು ಯಾವಾಗಲೂ ನೋಡುತ್ತಿರುತ್ತಾರೆ' (ಸು. ೬), 'ಅದು ನಾಶರಹಿತವಾದ ಪರಮಾಕಾಶದಲ್ಲಿದೆ' (ತೈ.ನಾ. ೧-೧), 'ಈ ರಜಸ್ಸಿನ ಆಚೆ ವಾಸಮಾಡಿಕೊಂಡಿರುವ' (ಸಾಮ. ಉತ್ತರ. ೧೭-೨-೨), 'ತಮಸ್ಸಿನ ಆಚೆಯಿರುವ ಪುರಾಣನಾದ ವಿಶ್ವನು' (ತೈ. ನಾ. ೧೧), 'ಆ ಮಹಾತ್ಮರು ಎಲ್ಲಿ ಹಿಂದಿನ ಸಾಧ್ಯರೆಂಬ ದೇವತೆಗಳಿರುವರೋ ಆ ನಾಕವನ್ನು ಅರಿಯುತ್ತಾರೆ' (ತೈ. ಆ. ಪು. ೩-೧೨ ೩೮)- ಎಂದು ಮುಂತಾಗಿ ಸಕಲೋಪನಿಷತ್ತುಗಳಲ್ಲಿಯೂ ಪ್ರಸಿದ್ಧವಾಗಿರುತ್ತದೆ.

## ಅಂತರಧಿಕರಣ

### ೪೫. ಅನ್ತರ ಉಪಪತ್ತೇಃ (೧-೨-೧೩)

(ಮೂಲ)

೫೩. 'ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ ಏತದಮೃತಮಭಯಮೇತದ್ ಬ್ರಹ್ಮ' (ಛಾಂ. ೪-೧೫-೧) ಇತ್ಯತ್ರ ಅಕ್ಷ್ಯಾಧಾರಃ ಪರಮಪುರುಷಃ। ನಿರುಪಾಧಿಕಾಮೃತತ್ವಾಭಯತ್ವಸಂಯದ್ವಾಮತ್ವಾದೀನಾಮಸ್ಮಿನ್ನೇವೋಪಪತ್ತೇಃ ॥ ೧೩ ॥

---

1. ಪ್ರಾಕೃತವಾದ ಸ್ಥಾನಗಳೆಲ್ಲಕ್ಕಿಂತಲೂ ಪರಮಾತ್ಮನ ಸ್ಥಾನವು ಆಚೆ ಇದೆ- ಎಂದು ಮೂಲಕ್ಕೆ ಸರಳವಾದ ಅರ್ಥವಾಗುತ್ತದೆ. ಆದರೆ ರಂಗರಾಮಾನುಜಭಾಷ್ಯದಲ್ಲಿ ದ್ಯುಲೋಕವೆಂಬ ಅಪ್ರಾಕೃತಸ್ಥಾನಕ್ಕಿಂತಲೂ ವಿಶ್ವ(ವ್ಯಷ್ಟಿ), ಸರ್ವ(ಸಮಷ್ಟಿ)ಲೋಕಗಳಿಗಿಂತಲೂ ಹೊರಚ್ಚಾದ ಲೋಕಗಳಲ್ಲಿರುವ ಜ್ಯೋತಿಯು ಎಂದರೆ ಪರಮಾತ್ಮನು- ಎಂದು ವ್ಯಾಖ್ಯಾನ ಮಾಡಿದೆ.

(ಅರ್ಥ)

೪೫. ಒಳಗಿರುವವನು (ಪರಮಾತ್ಮನೇ), ಏಕೆಂದರೆ ಹೊಂದುತ್ತದೆ.

'ಕಣ್ಣಿನೊಳಗೆ ಕಾಣಿಸುತ್ತಿರುವನಲ್ಲ, ಇವನು ಆತ್ಮನೇ, ಇದು ಅಮೃತವೂ ಅಭಯವೂ ಆದದ್ದು, ಇದೇ ಬ್ರಹ್ಮವು' (ಛಾಂ. ೪-೧೫-೧) ಎಂಬಲ್ಲಿ ಕಣ್ಣನ್ನು ಆಧಾರವೆಂದು ಹೇಳಿರುವವನು ಪರಮಪುರುಷನೇ. ಏಕೆಂದರೆ ಯಾವ ಉಪಾಧಿಯೂ ಇಲ್ಲದೆ ಅಮೃತತ್ವ, ಅಭಯತ್ವ, ಸಂಯದ್ವಾಮತ್ವ[1]– ಇವುಗಳನ್ನು ಹೇಳಿರುತ್ತದೆ. ॥ ೧೩ ॥

## ೪೬. ಸ್ಥಾನಾದಿವ್ಯಪದೇಶಾಚ್ಚ (೧-೨-೧೪)

(ಮೂಲ)

೫೪. 'ಯಶ್ಚಕ್ಷುಷಿ ತಿಷ್ಠನ್' (ಬೃ. ೩-೭-೧೮) ಇತ್ಯಾದಿನಾ ಸ್ಥಿತಿನಿಯಮನಾದಿವ್ಯಪದೇಶಾಚ್ಚಾಯಂ ಪರಃ ॥ ೧೪ ॥

(ಅರ್ಥ)

೪೬. ಇರುವಿಕೆಯೇ ಮುಂತಾದವುಗಳನ್ನು ಹೇಳಿರುವದರಿಂದಲೂ (ಪರಮಾತ್ಮನೇ).

'ಯಾವನು ಕಣ್ಣಿನಲ್ಲಿ ಇರುವವನಾಗಿ.....' (ಬೃ. ೩-೭-೧೮) ಎಂದು ಮುಂತಾದ ವಾಕ್ಯದಿಂದ ಇರುವಿಕೆ, ನಿಯಮಿಸುವಿಕೆ– ಮುಂತಾದವುಗಳನ್ನು[2] ಹೇಳಿರುವದರಿಂದಲೂ ಇವನು ಪರಮಾತ್ಮನೇ.

## ೪೭. ಸುಖವಿಶಿಷ್ಟಾಭಿಧಾನಾದೇವ ಚ (೧-೨-೧೫)

(ಮೂಲ)

೫೫. 'ಕಂ ಬ್ರಹ್ಮ ಖಂ ಬ್ರಹ್ಮ' (ಛಾಂ. ೪-೧೦-೫) ಇತಿ ಪೂರ್ವತ್ರ ಅಸ್ಯೈವ ಸುಖವಿಶಿಷ್ಟತಯಾ ಅಭಿಧಾನಾಚ್ಚ ಅಯಂ ಪರಃ ॥ ೧೫ ॥

---

1. ಸಂಪೂರ್ಣವಾಗಿ ಅಮೃತತ್ವವು ಪರಮಾತ್ಮನಿಗೆ ಮಾತ್ರವೇ ಇದೆ, ಅಭಯತ್ವವೂ ಹಾಗೆಯೇ; ಸಂಯದ್ವಾಮತ್ವವೆಂದರೆ ಸರ್ವಕಲ್ಯಾಣಗುಣಾಶ್ರಯತ್ವವು ಅಥವಾ ಸತ್ಯಸಂಕಲ್ಪತ್ವವು (ರಂ. ರಾ.) ಇವುಗಳು ಪರಮಾತ್ಮನಿಗೆ ಹೊಂದುತ್ತವೆಯಾದ್ದರಿಂದ ಕಣ್ಣಿನಲ್ಲಿ ಯೋಗಿಗಳಿಗೆ ಕಾಣಿಸುವ ಪರಮಾತ್ಮನನ್ನೇ ಈ ವಾಕ್ಯದಲ್ಲಿ ಹೇಳಿದೆ ಎಂದರ್ಥ.

2. ಕಣ್ಣಿನ ಇಂದ್ರಿಯದಲ್ಲಿರುತ್ತಾನೆ, ಅದಕ್ಕೂ ಒಳಗೆ ಇದ್ದಾನೆ. ಅವನನ್ನು ಚಕ್ಷುರಿಂದ್ರಿಯವು ಅರಿಯದು, ಅವನಿಗೆ ಚಕ್ಷುರಿಂದ್ರಿಯವು ಶರೀರವು, ಅದನ್ನು ಒಳಗಿದ್ದು ಅವನು ನಿಯಮಿಸುತ್ತಾನೆ– ಎಂದು ಇಲ್ಲಿ ಹೇಳಿದೆ.

(ಅರ್ಥ)

**೪೭. ಮತ್ತು ಸುಖವಿಶಿಷ್ಟನೆಂದು ಹೇಳಿರುವದರಿಂದಲೇ (ಇವನು ಪರಮಾತ್ಮನು).**

'ಕಂ (ಸುಖವು) ಬ್ರಹ್ಮವು, ಖಂ (ಆಕಾಶದಂತೆ ಅಪರಿಚ್ಛಿನ್ನವಾದದ್ದು) ಬ್ರಹ್ಮವು' (ಛಾಂ. ೪-೧೦-೫) ಎಂದು ಹಿಂದೆ ಈ (ಪರಮಾತ್ಮನನ್ನೇ) ಸುಖದಿಂದ ಕೂಡಿರುವನೆಂದು ಹೇಳಿರುವದರಿಂದಲೂ ಇವನು ಪರಮಾತ್ಮನೇ ॥ ೧೫ ॥

## ೪೮. ಅತ ಏವ ಚ ಸ ಬ್ರಹ್ಮ (೧-೨-೧೬)[1]

(ಮೂಲ)

೫೬. ಯತಸ್ತತ್ರ ಭವಭೀತಾಯ ಉಪಕೋಸಲಾಯ ಬ್ರಹ್ಮಜಿಜ್ಞಾಸವೇ 'ಕಂ ಬ್ರಹ್ಮ ಖಂ ಬ್ರಹ್ಮ' (ಛಾಂ. ೪-೧೦-೫), 'ಯದ್ವಾವ ಕಂ ತದೇವ ಖಮ್' (ಛಾಂ. ೪-೧೦-೫) ಇತಿ ಸುಖರೂಪಃ, ಅತಃ ಸುಖಶಬ್ದಾಭಿಧೇಯ ಆಕಾಶಃ ಪರಮೇವ ಬ್ರಹ್ಮ ॥ ೧೬ ॥

(ಅರ್ಥ)

**೪೮. ಮತ್ತು ಆದ್ದರಿಂದಲೇ ಅದು ಬ್ರಹ್ಮವೇ.**

ಅಲ್ಲಿ ಸಂಸಾರಭೀತನಾಗಿ ಬ್ರಹ್ಮವನ್ನು ಅರಿಯಬೇಕೆಂದಿಚ್ಛಿಸಿದ್ದ ಉಪಕೋಸಲನಿಗೆ 'ಕಂ (ಸುಖವು) ಬ್ರಹ್ಮವು, ಖಂ (ಆಕಾಶದಂತಿರುವದು) ಬ್ರಹ್ಮವು' (ಛಾಂ. ೪-೧೦-೫), 'ಯಾವದು ಕಂ (ಸುಖ)ವೋ ಅದೇ ಖಮ್ (ಆಕಾಶವು)' (ಛಾಂ.೪-೧೦-೫) ಎಂದು ಸುಖರೂಪವಾದ (ಆಕಾಶವನ್ನು ಅಗ್ನಿಗಳು) ಉಪದೇಶ ಮಾಡಿರುತ್ತವೆಯಷ್ಟೆ, ಆದ್ದರಿಂದ ಸುಖಶಬ್ದದಿಂದ ಹೇಳಿರುವ ಆಕಾಶವು ಪರಬ್ರಹ್ಮವೇ. ॥ ೧೬ ॥

## ೪೯. ಶ್ರುತೋಪನಿಷತ್ಕಗತ್ಯಭಿಧಾನಾಚ್ಚ (೧-೨-೧೭)

(ಮೂಲ)

೫೭. ಶ್ರುತಬ್ರಹ್ಮಸ್ವರೂಪಾಣಾಮ್ ಅಧಿಗನ್ತೃವ್ಯತಯಾ ಅರ್ಚಿರಾದಿ ಗತೇರಕ್ಷಿಪುರುಷಂ ಶ್ರುತವತೇ 'ತೇಽರ್ಚಿಷಮೇವಾಭಿಸಂಭವನ್ತಿ' (ಛಾಂ.೪-೧೫-೫) ಇತ್ಯಾದಿನಾ ಅಭಿಧಾನಾಚ್ಚ ಅಯಂ ಪರಮಪುರುಷಃ ॥ ೧೭ ॥

(ಅರ್ಥ)

**೪೯. ಶ್ರುತೋಪನಿಷತ್ಕರಿಗೆ (ಸಿಕ್ಕುವ) ಗತಿಯನ್ನು ಹೇಳಿರುವದರಿಂದಲೂ.**

1. ಈ ಸೂತ್ರವು ಶಾಂಕರಪಾಠದಲ್ಲಿಲ್ಲ.

ಬ್ರಹ್ಮಸ್ವರೂಪವನ್ನು ಶ್ರವಣಮಾಡಿದವರಿಗೆ ಸಿಕ್ಕತಕ್ಕದ್ದಾದ ಅರ್ಚಿರಾದಿ ಗತಿಯನ್ನು ಅಕ್ಷಿಪುರುಷನನ್ನು ಶ್ರವಣಮಾಡಿದ (ಉಪಕೋಸಲನಿಗೆ) 'ಅವರು ಅರ್ಚಿಯನ್ನೇ ಪಡೆದುಕೊಳ್ಳುತ್ತಾರೆ....' (ಛಾಂ. ೪-೧೫-೫) ಎಂದು ಮುಂತಾದ (ವಾಕ್ಯ)ದಿಂದ ಹೇಳಿರುವದರಿಂದಲೂ ಈ (ಅಕ್ಷಿಪುರುಷನು) ಪರಮಪುರುಷನೇ. ॥ ೧೭ ॥

## ೫೦. ಅನವಸ್ಥಿತೇರಸಂಭವಾಚ್ಚ ನೇತರಃ (೧-೨-೧೮)

(ಮೂಲ)

೫೮. ಪರಸ್ಮಾದಿತರೋ ಜೀವಾದಿಃ, ನಾಕ್ಷ್ಯಾಧಾರಃ। ಚಕ್ಷುಷಿ ನಿಯಮೇನ ಅನವಸ್ಥಿತೇಃ । ಅಮೃತತ್ವಾದ್ಯಸಂಭವಾಚ್ಚ ॥ ೧೮ ॥

(ಅರ್ಥ)

**೫೦. ಇದ್ದುಕೊಂಡಿರುವದಿಲ್ಲವಾದ್ದರಿಂದಲೂ, ಸಂಭವಿಸುವದಿಲ್ಲ ವಾದ್ದರಿಂದಲೂ ಇತರನಲ್ಲ.**

ಅಕ್ಷಿಯನ್ನಾಧಾರವಾಗುಳ್ಳ (ಈ ಪುರುಷನು) ಇತರನಲ್ಲ, ಪರಮಾತ್ಮನಿಗಿಂತ ಬೇರೆಯಾದ ಜೀವನೇ ಮೊದಲಾದವರಲ್ಲ. ಏಕೆಂದರೆ (ಅವರು) ಕಣ್ಣಿನಲ್ಲಿಯೇ ಗೊತ್ತಾಗಿ ಇದ್ದುಕೊಂಡಿರುವದಿಲ್ಲ. ಅಮೃತತ್ವವೇ ಮುಂತಾದ (ವಿಶೇಷಣಗಳು ಅವರಿಗೆ) ಸಂಭವಿಸುವದೂ ಇಲ್ಲ. ॥ ೧೮ ॥

# ಅಂತರ್ಯಾಮ್ಯಧಿಕರಣ

## ೫೧. ಅನ್ತರ್ಯಾಮ್ಯಧಿದೈವಾಧಿಲೋಕಾದಿಷು ತದ್ಧರ್ಮ ವ್ಯಪದೇಶಾತ್ (೧-೨-೧೯)

(ಮೂಲ)

೫೯. 'ಯಃ ಪೃಥಿವ್ಯಾಂ ತಿಷ್ಠನ್' (ಬೃ. ೩-೭-೩) ಇತ್ಯಾದಿಷು ಅಧಿದೈವಾಧಿಲೋಕಾದಿಪದಚಿಹ್ನಿತೇಷು ವಾಕ್ಯೇಷು ಶ್ರೂಯಮಾಣೋಽನ್ತರ್ಯಾಮೀ ಪರಮಪುರುಷಃ । ಸರ್ವಾನ್ತರತ್ವಸರ್ವಾವಿದಿತತ್ವಸರ್ವಶರೀರಕತ್ವಸರ್ವನಿಯನ್ತೃತ್ವಾದಿಪರಮಾತ್ಮಧರ್ಮವ್ಯಪದೇಶಾತ್ ॥ ೧೯ ॥

(ಅರ್ಥ)

**೫೧. ಅಧಿದೈವ, ಅಧಿಲೋಕ- ಮುಂತಾದವುಗಳಲ್ಲಿ ಅಂತರ್ಯಾಮಿಯು (ಪರಮಾತ್ಮನೇ), ಏಕೆಂದರೆ ಅವನ ಧರ್ಮವನ್ನು ಹೇಳಿರುತ್ತದೆ.**

'ಯಾವನು ಪೃಥಿವಿಯಲ್ಲಿ ಇರುವವನಾಗಿ' (ಬೃ. ೩-೭-೩) ಎಂಬಿದೇ ಮುಂತಾದ 'ಅಧಿದೈವ', 'ಅಧಿಲೋಕ'- ಮುಂತಾದ ಪದಗಳಿಂದ ಗುರುತು ಮಾಡಿರುವ ವಾಕ್ಯಗಳಲ್ಲಿ ಶ್ರುತಿಯು ಹೇಳಿರುವ ಅಂತರ್ಯಾಮಿಯು ಪರಮ ಪುರುಷನೇ. ಏಕೆಂದರೆ ಸರ್ವಾಂತರತ್ವ (ಎಲ್ಲಕ್ಕೂ ಒಳಗಿರುವಿಕೆ), ಸರ್ವಾವಿದಿತತ್ವ (ಯಾರೊಬ್ಬರಿಂದಲೂ ಅರಿಯುವದಕ್ಕೆ ಆಗದೆ ಇರುವಿಕೆ), ಸರ್ವಶರೀರವತ್ತ್ವ (ಎಲ್ಲವನ್ನೂ ಶರೀರವಾಗಿ ಉಳ್ಳವನಾಗಿರುವಿಕೆ), ಸರ್ವನಿಯಂತೃತ್ವ (ಎಲ್ಲರನ್ನೂ ಆಳುವಿಕೆ)- ಇವೇ ಮುಂತಾದ ಪರಮಾತ್ಮನ ಧರ್ಮಗಳನ್ನು (ಅಲ್ಲಿ) ಹೇಳಿರುತ್ತದೆ. ॥ ೧೯ ॥

## ೫೨. ನ ಚ ಸ್ಮಾರ್ತಮತದ್ಧರ್ಮಾಭಿಲಾಪಾಚ್ಛಾರೀರಶ್ಚ (೧-೨-೨೦)

(ಮೂಲ)

೬೦. ನಾಯಂ ಪ್ರಧಾನಂ ಜೀವಶ್ಚ । ತಯೋರಸಂಭಾವಿತಸರ್ವಾವಿದಿತತ್ವಾದಿಧರ್ಮಾಭಿಲಾಪಾತ್ । ಅಸಂಭಾವನಯಾ ಯಥಾ ನ ಸ್ಮಾರ್ತಮ್, ತಥಾ ಜೀವೋಽಪಿ ಇತ್ಯರ್ಥಃ ॥ ೨೦ ॥

(ಅರ್ಥ)

**೫೨. (ಅಂತರ್ಯಾಮಿಯು) ಸ್ಮಾರ್ತವಲ್ಲ, ಏಕೆಂದರೆ ಅದರದಲ್ಲದ ಧರ್ಮವನ್ನು ಹೇಳಿದೆ, ಶಾರೀರನೂ ಅಲ್ಲ.**[1]

ಈ (ಅಂತರ್ಯಾಮಿಯು ಸಾಂಖ್ಯಸ್ಮೃತಿಯಲ್ಲಿ ಹೇಳಿರುವ) ಪ್ರಧಾನವೂ ಅಲ್ಲ, ಜೀವನೂ ಅಲ್ಲ. ಏಕೆಂದರೆ ಅವರಿಬ್ಬರಿಗೂ ಸಂಭವಿಸಲಾರದ ಯಾರೊಬ್ಬರಿಂದಲೂ ಅರಿಯುವದಕ್ಕಾಗದೆ ಇರುವಿಕೆಯೇ ಮುಂತಾದ ಧರ್ಮಗಳನ್ನು ಹೇಳಿದೆ. ('ಶಾರೀರನೂ ಅಲ್ಲ' ಎಂದರೆ ಧರ್ಮವು) ಸಂಭವಿಸುವದಿಲ್ಲವಾದ್ದರಿಂದ ಹೇಗೆ ಸ್ಮೃತಿಯಲ್ಲಿ ಹೇಳಿರುವ (ಪ್ರಧಾನವು ಅಂತರ್ಯಾಮಿ)ಯಲ್ಲವೋ, ಹಾಗೆಯೇ ಜೀವನೂ (ಅಲ್ಲ) ಎಂದರ್ಥ. ॥ ೨೦ ॥

## ೫೩. ಉಭಯೇಽಪಿ ಹಿ ಭೇದನೈನಮಧೀಯತೇ (೧-೨-೨೧)

(ಮೂಲ)

೬೧. ಉಭಯೇ ಕಾಣ್ವಾ ಮಾಧ್ಯಂದಿನಾಶ್ಚ 'ಯೋ ವಿಜ್ಞಾನೇ ತಿಷ್ಠನ್' (ಬೃ. ೩-೭-೨೨), 'ಯ ಆತ್ಮನಿ ತಿಷ್ಠನ್ನಾತ್ಮನೋಽನ್ತರೋ ಯಮಾತ್ಮಾ ನ

---

1. 'ಶಾರೀರಶ್ಚ' ಎಂಬುದು ಶಾಂಕರಪಾಠದಂತೆ ಮುಂದಿನ ಸೂತ್ರಕ್ಕೆ ಸೇರಿದೆ. ರಾಮಾನುಜೀಯಪಾಠದಲ್ಲಿ ಜೀವನು ಅಂತರ್ಯಾಮಿಯಲ್ಲ ಎಂಬುದಕ್ಕೆ ಎರಡು ಕಾರಣಗಳನ್ನು ಕೊಟ್ಟಂತೆ ಆಗಿ ವಿಶೇಷವಿದೆ.

ವೇದ ಯಸ್ಯಾಽಽತ್ಮಾ ಶರೀರಂ ಯ ಆತ್ಮಾನಮನ್ತರೋ ಯಮಯತಿ' (ಬೃ. ಮಾ. ೩-೭-೩೦) ಇತಿ ಪ್ರತ್ಯಗಾತ್ಮನೋ ಭೇದೇನ ಏನಮ್ ಅನ್ತರ್ಯಾಮಿಣಮ್ ಅಧೀಯತೇ । ಅತಃ ಪರ ಏವಾಯಮ್ ॥ ೨೧ ॥

(ಅರ್ಥ)

**೫೩. ಇಬ್ಬರೂ ಇವನನ್ನು ಭೇದವಾಗಿಯೇ ಅಧ್ಯಯನಮಾಡು ತ್ತಾರಷ್ಟೆ ?**

ಇಬ್ಬರೂ ಎಂದರೆ ಕಾಣ್ವರೂ ಮಾಧ್ಯಂದಿನರೂ 'ಯಾವನು ವಿಜ್ಞಾನದಲ್ಲಿರು ವವನಾಗಿ' (ಬೃ. ೩-೭-೨೨), 'ಯಾವನು ಆತ್ಮನಲ್ಲಿ ಇರುವವನಾಗಿ ಆತ್ಮನ ಒಳಗಿರುವನೋ ಯಾವನನ್ನು ಆತ್ಮನು ಅರಿಯನೋ ಯಾವನಿಗೆ ಆತ್ಮನು ಶರೀರವೋ ಯಾವನು ಆತ್ಮನನ್ನು ಒಳಗಿದ್ದು ನಿಯಮಿಸುತ್ತಿರುವನೋ' (ಬೃ. ಮಾ. ೩-೭-೩೦) ಎಂದು ಈ ಅಂತರ್ಯಾಮಿಯನ್ನು ಪ್ರತ್ಯಗಾತ್ಮನಿಗಿಂತ ಬೇರೆ ಯಾಗಿ ಅಧ್ಯಯನಮಾಡುತ್ತಿದಾರಷ್ಟೆ ? ಆದ್ದರಿಂದ ಇವನು ಪರಮಾತ್ಮನೇ.

## ಅದೃಶ್ಯತ್ವಾದಿಗುಣಕಾಧಿಕರಣ

### ೫೪. ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ (೧-೨-೨೨)

(ಮೂಲ)

೭೨. 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ ಯತ್ತದದ್ರೇಶ್ಯಮ್' ಇತ್ಯಾರಭ್ಯ 'ಯದ್ಭೂತಯೋನಿಂ ಪರಿಪಶ್ಯನ್ತಿ ಧೀರಾಃ' (ಮುಂ. ೧-೧-೫,೬), 'ಅಕ್ಷರಾತ್ ಪರತಃ ಪರಃ' (ಮುಂ. ೨-೧-೨) ಇತ್ಯಾದೌ ಪ್ರಧಾನಾತ್ ಪ್ರತ್ಯ ಗಾತ್ಮನಶ್ಚ ಅರ್ಥಾನ್ತರಭೂತಃ ಪರಮಾತ್ಮಾ ಪ್ರತಿಪಾದ್ಯತೇ 'ಯಃ ಸರ್ವಜ್ಞಃ ಸರ್ವವಿತ್' (ಮುಂ. ೧-೧-೧೦) ಇತ್ಯಾದಿಧರ್ಮೋಕ್ತೇಃ ॥ ೨೨ ॥

(ಅರ್ಥ)

**೫೪. ಅದೃಶ್ಯತ್ವಾದಿಗುಣಗಳುಳ್ಳವನು (ಪರಮಾತ್ಮನು), ಏಕೆಂದರೆ (ಅವನ) ಧರ್ಮಗಳನ್ನು ಹೇಳಿದೆ.**

ಇನ್ನು 'ಆ ಅಕ್ಷರವು ಏತರಿಂದ (ಅಪರೋಕ್ಷವಾಗಿ) ತಿಳಿಯಲ್ಪಡುತ್ತದೆಯೋ ಆ ಪರವಿದ್ಯೆ : ಯಾವದು ಅದೃಶ್ಯವಾಗಿರುವದೋ' ಎಂದು ಪ್ರಾರಂಭಿಸಿ 'ಯಾವ ದನ್ನು ಬಲ್ಲವರು ಭೂತಯೋನಿ ಎಂದು ಕಂಡುಕೊಂಡಿರುವರೋ' (ಮುಂ. ೧-೧-೫,೬) ಅಕ್ಷರಕ್ಕಿಂತಲೂ ಪರ(ನಾದ ಸಮಷ್ಟಿಪುರುಷನಿ)ಗಿಂತಲೂ ಪರನಾದವನು' (ಮುಂ. ೨-೧-೨) ಮುಂತಾದ (ವಾಕ್ಯ)ದಲ್ಲಿ ಪ್ರಧಾನಕ್ಕಿಂತಲೂ ಪ್ರತ್ಯಗಾತ್ಮನಿಗಿಂತಲೂ ಬೇರೆಯಾಗಿರುವ ಪರಮಾತ್ಮನನ್ನೇ ಹೇಳಿರುತ್ತದೆ.

ಏಕೆಂದರೆ ಯಾವನು ಸರ್ವ(ವಿಷಯಕ)ಜ್ಞಾನವುಳ್ಳವನೋ ಸರ್ವ(ಪ್ರಕಾರಕ) ಜ್ಞಾನವುಳ್ಳವನೋ' (ಮುಂ. ೧-೧-೧೦) ಎಂಬುವುಂತಾಗಿ (ಅವನ) ಧರ್ಮ ಗಳನ್ನು ಹೇಳಿರುತ್ತದೆ. ॥ ೨೨ ॥

**೫೫. ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ (೧-೨-೨೩)**

(ಮೂಲ)

೬೩. ಏಕವಿಜ್ಞಾನೇನ ಸರ್ವವಿಜ್ಞಾನರೂಪವಿಶೇಷಣವ್ಯಪದೇಶಾನ್ನ ಪ್ರಧಾನಮ್, 'ಅಕ್ಷರಾತ್ ಪರತಃ ಪರಃ' (ಮುಂ. ೧-೧-೯) ಇತಿ ಪ್ರಧಾನಾತ್ ಪರತಃ ಪ್ರತ್ಯಗಾತ್ಮನೋಽಪಿ ಪರಃ ಇತಿ ಭೇದವ್ಯಪದೇಶಾತ್ ನ ಪ್ರತ್ಯಗಾತ್ಮಾ ಚ । ಅಥವಾ ಸಾಮಾನಾಧಿಕರಣ್ಯೇನ ಪರತೋಽಕ್ಷರಾತ್ ಪಞ್ಚವಿಂಶಕಾತ್ ಪರ ಇತಿ ಭೇದವ್ಯಪದೇಶಃ ॥ ೨೩ ॥

(ಅರ್ಥ)

**೫೫. ವಿಶೇಷಣಭೇದವ್ಯಪದೇಶಗಳಿರುವದರಿಂದ ಬೇರೆಯವರಲ್ಲ.**

ಒಂದನ್ನು ಅರಿತರೆ ಎಲ್ಲವನ್ನೂ ಅರಿತಂತಾಗುವದೆಂಬ ವಿಶೇಷಣವನ್ನು ಹೇಳಿರುವದರಿಂದ ಪ್ರಧಾನವಲ್ಲ. 'ಅಕ್ಷರಕ್ಕಿಂತಲೂ ಪರನಾದವನಿಗಿಂತ ಪರನಾದ ವನು' (ಮುಂ. ೧-೧-೯) ಎಂದು ಪ್ರಧಾನಕ್ಕಿಂತಲೂ ಹೆಚ್ಚಿನವನಾದ ಪ್ರತ್ಯಗಾತ್ಮ ನಿಗಿಂತಲೂ ಹೆಚ್ಚಿನವನಾದವನು ಎಂದು ಭೇದವನ್ನು ಹೇಳಿರುವದರಿಂದ ಪ್ರತ್ಯಗಾತ್ಮನೂ ಅಲ್ಲ. ಅಥವಾ ಸಮಾನಾಧಿಕರಣವಾಗಿಯೇ ಪರನಾದ ಅಕ್ಷರನಿ ಗಿಂತ, ಎಂದರೆ ಇಪ್ಪತ್ತೈದನೆಯವನಾದ (ಪ್ರತ್ಯಗಾತ್ಮನಿಗಿಂತ) ಪರನಾದವನು ಎಂದು (ಪರಮಾತ್ಮನನ್ನು) ಬೇರೆಯೆಂದು ಹೇಳಿದೆ (ಎಂದಾದರೂ ಭೇದವ್ಯಪದೇಶ ಎಂಬ ಶಬ್ದಕ್ಕೆ ವ್ಯಾಖ್ಯಾನಮಾಡಬಹುದು). ॥ ೨೩ ॥

**೫೬. ರೂಪೋಪನ್ಯಾಸಾಚ್ಚ (೧-೨-೨೪)**

(ಮೂಲ)

೬೪. 'ಅಗ್ನಿರ್ಮೂರ್ಧಾ' (ಮುಂ. ೨-೧-೪) ಇತ್ಯಾದಿನಾ ತ್ರೈಲೋಕ್ಯ ಶರೀರೋಪನ್ಯಾಸಾಚ್ಚ ಪರಮಾತ್ಮಾ ॥ ೨೪ ॥

(ಅರ್ಥ)

**೫೬. ರೂಪವನ್ನು ತಿಳಿಸಿಕೊಟ್ಟಿರುವದರಿಂದಲೂ.**

'ಅಗ್ನಿಯು ನೆತ್ತಿ' (ಮುಂ. ೨-೧-೪) ಎಂಬುವುಂತಾಗಿರುವ ವಾಕ್ಯದಿಂದ ಮೂರು ಲೋಕವೂ (ಇವನ) ಶರೀರವು ಎಂದು ತಿಳಿಸಿಕೊಟ್ಟಿರುವದರಿಂದ (ಇವನು) ಪರಮಾತ್ಮನೇ. ॥ ೨೪ ॥

## ವೈಶ್ವಾನರಾಧಿಕರಣ

### ೫೭. ವೈಶ್ವಾನರಃ ಸಾಧಾರಣಶಬ್ದ ವಿಶೇಷಾತ್ (೧-೨-೨೫)

(ಮೂಲ)

೬೫. 'ಆತ್ಮಾನಮೇವೇಮಂ ವೈಶ್ವಾನರಮ್' (ಛಾಂ. ೫-೧೧-೬) ಇತ್ಯಾದೌ ವೈಶ್ವಾನರಃ ಪರಮಾತ್ಮಾ। ಜಾಠರಾಗ್ನ್ಯಾದಿಷು ಸಾಧಾರಣಸ್ಯಾಪಿ ವೈಶ್ವಾನರಶಬ್ದಸ್ಯ ಅಸ್ಮಿನ್ ಪ್ರಕರಣೇ ಪರಮಾತ್ಮಾಸಾಧಾರಣೈಃ ಸರ್ವಾತ್ಮಕತ್ವ ಬ್ರಹ್ಮಶಬ್ದಾದಿಭಿರ್ವಿಶೇಷ್ಯಮಾಣತ್ವಾತ್ ॥ ೨೫ ॥

(ಅರ್ಥ)

**೫೭. ವೈಶ್ವಾನರನು (ಪರಮಾತ್ಮನು); ಏಕೆಂದರೆ ವಿಶೇಷಣ ವನ್ನು ಕೊಟ್ಟಿದೆ.**

"ಆತ್ಮನಾಗಿರುವ ಈ ವೈಶ್ವಾನರನನ್ನು (ನೀನು ಉಪಾಸನೆಮಾಡಿರುವೆಯಷ್ಟೆ)" (ಛಾಂ. ೫-೧೧-೬) ಎಂದು ಮುಂತಾಗಿರುವ ವಾಕ್ಯದಲ್ಲಿ (ಹೇಳಿರುವ) ವೈಶ್ವಾನರನು ಪರಮಾತ್ಮನು. ವೈಶ್ವಾನರಶಬ್ದವು ಜಾಠರಾಗ್ನಿಯೇ ಮುಂತಾದವುಗಳಿಗೆ[1] ಸಾಧಾರಣವಾಗಿದ್ದರೂ ಈ ಪ್ರಕರಣದಲ್ಲಿ ಪರಮಾತ್ಮನಿಗೇ ಅಸಾಧಾರಣವಾಗಿರುವ ಸರ್ವಾತ್ಮಕತ್ವ, ಬ್ರಹ್ಮಶಬ್ದ- ಮುಂತಾದ (ಧರ್ಮ)ವಿಶೇಷಗಳನ್ನು (ಅದಕ್ಕೆ) ಹೇಳಿರುತ್ತದೆ. ॥ ೨೫ ॥

### ೫೮. ಸ್ಮರ್ಯಮಾಣಮನುಮಾನಂ ಸ್ಯಾದಿತಿ (೧-೨-೨೬)

(ಮೂಲ)

೬೬. ದ್ಯುಲೋಕಪ್ರಭೃತಿ ಪೃಥಿವ್ಯನ್ತಂ ರೂಪಮ್ 'ಅಗ್ನಿರ್ಮೂರ್ಧಾ' (ಮುಂ. ೨-೧-೪) ಇತ್ಯಾದಿಸೂಕ್ತಮ್ ಅತ್ರ ಪ್ರತ್ಯಭಿಜ್ಞಾಯಮಾನಮ್ ಅಸ್ಯ ಪರಮಾತ್ಮತ್ವೇ ಅನುಮಾನಮ್, ಲಿಂಗಮಿತ್ಯರ್ಥಃ ॥ ೨೬ ॥

(ಅರ್ಥ)

**೫೮. ನೆನಪಿಗೆ ಬರುತ್ತಿರುವದು ಅನುಮಾನವಾಗುವದಾದ್ದರಿಂದ.**

ದ್ಯುಲೋಕದಿಂದ ಹಿಡಿದು ಪೃಥಿವಿಯವರೆಗಿನ ರೂಪವು. 'ಅಗ್ನಿಯೇ

1. ಮುಂತಾದ ಎಂದರೆ ಮಹಾಭೂತಗಳಲ್ಲಿ ಮೂರನೆಯದಾದ ಅಗ್ನಿ, ದೇವತೆ, ಪರಮಾತ್ಮ- ಇವರು.

ಮೂರ್ಧವು' (ಮುಂ. ೨-೧-೪) ಮುಂತಾದ (ವಾಕ್ಯ)ಗಳಲ್ಲಿ ಹೇಳಿದ್ದೇ[1] ಇಲ್ಲಿ ಪ್ರತ್ಯಭಿಜ್ಞಾತವಾಗುತ್ತಿರುವದು ಈ (ವೈಶ್ವಾನರನು) ಪರಮಾತ್ಮನೇ ಎಂಬುದಕ್ಕೆ ಅನುಮಾನವು ಎಂದರೆ ಗುರುತು[2] ಎಂದರ್ಥ. ‖ ೨೬ ‖

**೫೯. ಶಬ್ದಾದಿಭ್ಯೋಽನ್ತಃಪ್ರತಿಷ್ಠಾನಾಚ್ಚ ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾದಸಂಭವಾತ್ ಪುರುಷಮಪಿ ಚೈನಮಧೀಯತೇ (೧-೨-೨೭)**

(ಮೂಲ)

೬೭. 'ಸ ಏಷೋಽಗ್ನಿರ್ವೈಶ್ವಾನರಃ' (ಶತ. ಬ್ರಾ. ೧೦-೬-೧-೧೧) ಇತಿ ಅಗ್ನಿಶಬ್ದಸಾಮಾನಾಧಿಕರಣ್ಯಾತ್, ಪ್ರಾಣಾಹುತ್ಯಾಧಾರತ್ವಾದಿಭಿಃ, 'ಪುರುಷೇಽನ್ತಃಪ್ರತಿಷ್ಠಿತಮ್' (ಶತ. ಬ್ರಾ. ೧೦-೬-೧-೧೧) ಇತ್ಯಾದೇಶ್ಚ ನಾಯಂ ಪರಮಾತ್ಮಾ ಇತಿ ಚೇತ್! ನೈತತ್। ಜಾಠರಾಗ್ನಿಶರೀರಕತ್ವೇನ ಉಪಾಸ್ಯತ್ವೋಪದೇಶಾತ್ ಕೇವಲಜಾಠರಾಗ್ನೇಃ ತ್ರೈಲೋಕ್ಯಶರೀರಕತ್ವಾದ್ಯಸಂಭವಾಚ್ಚ। 'ಸ ಏಷೋಽಗ್ನಿರ್ವೈಶ್ವಾನರೋ ಯತ್ಪುರುಷಃ' (ಶತ. ಬ್ರಾ. ೧೦-೬-೧-೧೧) ಇತ್ಯೇನಂ ವೈಶ್ವಾನರಂ ಪುರುಷಮಪ್ಯಧೀಯತೇ ವಾಜಿನಃ। ನಿರುಪಾಧಿಕಪುರುಷಶಬ್ದಶ್ಚ ಪರಮಾತ್ಮನಿ ನಾರಾಯಣ ಏವ। 'ಸಹಸ್ರಶೀರ್ಷಮ್' ಇತ್ಯಾರಭ್ಯ 'ವಿಶ್ವಮೇವೇದಂ ಪುರುಷಃ' (ತೈ. ನಾ. ೧೧-೨೫) ಇತ್ಯಾದಿಷು ಪ್ರಸಿದ್ಧಃ ‖ ೨೭ ‖

(ಅರ್ಥ)

**೫೯. ಶಬ್ದವೇ ಮುಂತಾದವುಗಳಿಂದಲೂ ಒಳಗೆ ಇರುವ(ನೆಂದಿರುವದ)ರಿಂದಲೂ ಹೀಗಲ್ಲ- ಎಂದರೆ (ಅದು ಸರಿ)ಯಲ್ಲ. ಏಕೆಂದರೆ ಹಾಗೆ ಉಪಾಸನೆಮಾಡಬೇಕೆಂದು ಉಪದೇಶಿಸಿದೆ. (ಅಗ್ನಿಗೆ ಇದು) ಸಂಭವಿಸುವಂತಿಲ್ಲ. ಈತನನ್ನು ಪುರುಷನೆಂದೂ ಅಧ್ಯಯನಮಾಡುತ್ತಿದಾರೆ.**

---

1. ಮುಂಡಕದಲ್ಲಿ ಅಗ್ನಿಯು, ದ್ಯುಲೋಕವು, ಮೂರ್ಧವು; ಚಂದ್ರಸೂರ್ಯರು ಚಕ್ಷುಸ್ಸುಗಳು; ದಿಕ್ಕುಗಳು ಶ್ರೋತ್ರಗಳು; ವೇದಗಳು ವಾಗಿಂದ್ರಿಯವ್ಯಾಪಾರ; ವಾಯುವು ಪ್ರಾಣ; ಜಗತ್ತೆಲ್ಲವೂ ಹೃದಯ; ಪೃಥಿವಿಯು ಪಾದವು- ಎಂದು ಹೇಳಿರುತ್ತದೆ. ಇಲ್ಲಿಯೂ ಅದನ್ನೇ ಹೇಳಿದೆ.

2. ಸೂತ್ರದಲ್ಲಿ 'ಸ್ಮರ್ಯಮಾಣ' ಎಂಬ ಶಬ್ದಕ್ಕೆ ಪ್ರತ್ಯಭಿಜ್ಞೆಯಾಗುವದು ಎಂದರ್ಥ; 'ಅನುಮಾನ' ಎಂಬುದಕ್ಕೆ ಲಿಂಗವು (ಗುರುತು) ಎಂದರ್ಥ -ಎಂದು ಭಾಷ್ಯ.

'ಆ ಈ ಅಗ್ನಿಯೆಂಬ ವೈಶ್ವಾನರನು' (ಶತ. ಬ್ರಾ. ೧-೬-೧-೧೧) ಎಂದು ಅಗ್ನಿಶಬ್ದದ ಸಾಮಾನಾಧಿಕರಣ್ಯವನ್ನು (ಹೇಳಿರುವದರಿಂದಲೂ)[1], ಪ್ರಾಣಾಹುತಿಗೆ ಆಧಾರವಾಗಿರುವದೇ ಮುಂತಾದ ಕಾರಣಗಳಿಂದಲೂ[2] 'ಪುರುಷನೊಳಗೆ ಪ್ರತಿಷ್ಠಿತನಾಗಿರುವ' (ಶತ. ಬ್ರಾ. ೧-೬-೧-೧೦)[3] -ಎಂಬಿವೇ ಮುಂತಾದ (ವಾಕ್ಯ)ದಿಂದಲೂ ಈ (ವೈಶ್ವಾನರನು) ಪರಮಾತ್ಮನಲ್ಲ ಎಂದರೆ—

ಇದು ಸರಿಯಲ್ಲ. ಏಕೆಂದರೆ ಜಾಠರಾಗ್ನಿ ಎಂಬ ಶರೀರವುಳ್ಳವನು ಎಂದು ಉಪಾಸನೆಮಾಡಬೇಕೆಂದು (ಇಲ್ಲಿ) ಹೇಳಿದೆ; ಮತ್ತು ಬರಿಯ ಜಾಠರಾಗ್ನಿಗೆ ತ್ರೈಲೋಕ್ಯವೂ ಶರೀರವಾಗಿರುವದೆಂಬುದು ಹೊಂದುವದೂ ಇಲ್ಲ. 'ಪುರುಷನಿದಾನಲ್ಲ. ಆ ಈತನೇ ಅಗ್ನಿಯೆಂಬ ವೈಶ್ವಾನರನು' (ಶತ.ಬ್ರಾ. ೧೦-೬-೧-೧೧) ಎಂದು ಈ ವೈಶ್ವಾನರನು ಪುರುಷನೆಂದೂ ವಾಜಿ(ಶಾಖೆಯವರು) ಅಧ್ಯಯನ ಮಾಡುತ್ತಿದಾರೆ. ಯಾವ ಉಪಾಧಿಯೂ ಇಲ್ಲದ ಪುರುಷನೆಂಬ ಶಬ್ದವು ಪರಮಾತ್ಮನಾದ ನಾರಾಯಣನಲ್ಲಿಯೇ (ವರ್ತಿಸುವದೆಂಬುದು) 'ಸಹಸ್ರಶೀರ್ಷನಾದ (ದೇವನನ್ನು)' ಎಂದು ಪ್ರಾರಂಭಿಸಿ 'ಇದೆಲ್ಲವೂ ಪುರುಷನೇ' (ತೈ. ನಾ. ೧೧-೨೫) ಎಂಬಿವೇ ಮುಂತಾದ (ಶ್ರುತಿ)ಗಳಲ್ಲಿ ಪ್ರಸಿದ್ಧವು.[4]

## ೬೦. ಅತ ಏವ ನ ದೇವತಾ ಭೂತಂ ಚ (೧-೨-೨೮)

### (ಮೂಲ)

೬೮. ಯತೋಽಯಂ ವೈಶ್ವಾನರಃ ತ್ರೈಲೋಕ್ಯಶರೀರಃ ಪುರುಷಶಬ್ದನಿರ್ದಿಷ್ಟಶ್ಚ। ತತೋಽಯಂ ನಾಗ್ನ್ಯಾಖ್ಯದೇವತಾ ತೃತೀಯಮಹಾಭೂತಂ ಚ॥೨೮॥

---

1. ಅಗ್ನಿಶಬ್ದದ ಜೊತೆಗೆ ವೈಶ್ವಾನರಶಬ್ದವನ್ನು ಸೇರಿಸಿ ಶತಪಥಬ್ರಾಹ್ಮಣದಲ್ಲಿ ವೈಶ್ವಾನರವಿದ್ಯಾಪ್ರಕರಣದಲ್ಲಿ ಹೇಳಿವೆ. ಇದರಿಂದ ಇದು ಪರಮಾತ್ಮನಲ್ಲವೆಂದು ಗೊತ್ತಾಗುತ್ತದೆ ಎಂದು ಭಾವ.

2. ಇಲ್ಲಿ (ಛಾಂ. ೫-೧೯-೧)ರಲ್ಲಿ ಪ್ರಾಣಾಹುತಿಯನ್ನು ವೈಶ್ವಾನರನಲ್ಲಿ ಮಾಡಬೇಕೆಂದಿದೆ. (ಛಾಂ. ೫-೧೮-೨ರಲ್ಲಿ) ಹೃದಯಾದಿಗಳಲ್ಲಿರುವ ವೈಶ್ವಾನರನು ಗಾರ್ಹಪತ್ಯವೇ ಮುಂತಾದ ಅಗ್ನಿತ್ರಯವೆಂದು ಕಲ್ಪಿಸಿರುತ್ತಾರೆ. ಈ ಕಾರಣಗಳಿಂದಲೂ ವೈಶ್ವಾನರನು ಜಾಠರಾಗ್ನಿಯೇ, ಪರಮಾತ್ಮನಲ್ಲ ಎನ್ನಬೇಕಾಗಿದೆ -ಎಂದು ಭಾವ.

3. 'ಏತಮೇವಾಗ್ನಿಂ ವೈಶ್ವಾನರಂ ಪುರುಷವಿಧಂ ಪುರುಷೇಽನ್ತಃಪ್ರತಿಷ್ಠಿತಂ ವೇದ' (ಶತ. ೧೦-೬-೧-೧೧) ಎಂಬ ವಾಕ್ಯದಲ್ಲಿ ಶರೀರದೊಳಗಿನ ವೈಶ್ವಾನರಾಗ್ನಿಯನ್ನೇ ಹೇಳಿದೆ ಎಂಬುದು ಸ್ಪಷ್ಟವಾಗಿದೆ; ಆದ್ದರಿಂದಲೂ ಇದು ಪರಮಾತ್ಮನಲ್ಲ- ಎಂದು ಪೂರ್ವಪಕ್ಷಿಯ ಭಾವ.

4. ಆದ್ದರಿಂದ ಜಾಠರಾಗ್ನಿಶರೀರಕನಾದ ಪರಮಪುರುಷನಾದ ನಾರಾಯಣನೇ ಇಲ್ಲಿ ಹೇಳಿರುವ ವೈಶ್ವಾನರನು.

(ಅರ್ಥ)

**೬೦. ಆದ್ದರಿಂದಲೇ ದೇವತೆಯಲ್ಲ, ಭೂತವೂ ಅಲ್ಲ.**

ಈ ವೈಶ್ವಾನರನು (ಹೀಗೆ) ತ್ರೈಲೋಕ್ಯಶರೀರನಾಗಿಯೂ ಪುರುಷಶಬ್ದದಿಂದ ಹೇಳಲ್ಪಟ್ಟವನೂ ಆಗಿರುವನಷ್ಟೆ, ಆದ್ದರಿಂದ ಇವನು ಅಗ್ನಿ ಎಂಬ ದೇವತೆಯಲ್ಲ, ಮೂರನೆಯ (ಅಗ್ನಿ ಎಂಬ) ಮಹಾಭೂತವೂ ಅಲ್ಲ. ॥ ೨೮ ॥

## ೬೧. ಸಾಕ್ಷಾದಪ್ಯವಿರೋಧಂ ಜೈಮಿನಿಃ (೧-೨-೨೯)

(ಮೂಲ)

೨೯. ನಾವಶ್ಯಮಗ್ನಿಶರೀರಕತ್ವೇನ ಉಪಾಸ್ಯತ್ವಾಯ ಇದಮಗ್ನಿಶಬ್ದ ಸಾಮಾನಾಧಿಕರಣ್ಯಮ್ । ಅಗ್ರನಯನಾದಿಯೋಗೇನ ಪರಮಾತ್ಮನ್ಯೇವ ಅಗ್ನಿ ಶಬ್ದಸ್ಯ ಸಾಕ್ಷಾದ್ವೃತ್ತೇಃ ಸಾಮಾನಾಧಿಕರಣ್ಯಾವಿರೋಧಂ ಜೈಮಿನಿರಾಚಾರ್ಯೋ ಮನ್ಯತೇ ॥ ೨೯ ॥

(ಅರ್ಥ)

**೬೧. ನೇರಾಗಿಯೂ ವಿರೋಧವಿಲ್ಲ ಎಂದು ಜೈಮಿನಿ.**

ಅಗ್ನಿಯನ್ನು ಶರೀರವಾಗಿ ಉಳ್ಳವನೆಂದು ಉಪಾಸನೆಮಾಡಬೇಕೆಂದೇ ಈ ಅಗ್ನಿಶಬ್ದದ ಸಾಮಾನಾಧಿಕರಣ್ಯವು[1] ಬಂದಿದೆ (ಎಂದು ಹೇಳಬೇಕಾದ) ಆವಶ್ಯ ಕತೆಯಿಲ್ಲ. ಮುಂದಾಳಾಗಿ ಕರೆದುಕೊಂಡು ಹೋಗುವಿಕೆ ಮುಂತಾದ (ಧರ್ಮದ) ಸಂಬಂಧದಿಂದ ಪರಮಾತ್ಮನಲ್ಲಿಯೇ ನೇರಾಗಿ (ಈ ಶಬ್ದಕ್ಕೆ) ವೃತ್ತಿ[2]ಯಿರಬಹು ದಾದ್ದರಿಂದ ಸಾಮಾನಾಧಿಕರಣ್ಯಕ್ಕೆ ವಿರೋಧವಿಲ್ಲ ಎಂದು ಜೈಮಿನಿ ಎಂಬ ಆಚಾರ್ಯನ ಮತವು. ॥ ೨೯ ॥

## ೬೨. ಅಭಿವ್ಯಕ್ತೇರಿತ್ಯಾಶ್ಮರಥ್ಯಃ (೧-೨-೩೦)

(ಮೂಲ)

೩೦. 'ಯಸ್ತ್ವೇತಮೇವಂ ಪ್ರಾದೇಶಮಾತ್ರಮ್' (ಛಾಂ. ೫-೧೮-೧) ಇತಿ ಅನವಚ್ಛಿನ್ನಸ್ಯ ದ್ಯುಪ್ರಭೃತಿಪರಿಚ್ಛಿನ್ನತ್ವಮ್ ಉಪಾಸನಾಭಿವ್ಯಕ್ತ್ಯರ್ಥಮ್ ಇತಿ ಆಶ್ಮರಥ್ಯಃ ॥ ೩೦ ॥

---

1. 'ಅಗ್ನಿರ್ವೈಶ್ವಾನರಃ' (ಅಗ್ನಿ ಎಂಬ ವೈಶ್ವಾನರ) ಎಂಬ ರೂಪದ ಸಾಮಾನಾಧಿ ಕರಣ್ಯವು.

2. ಅಗ್ನಿ ಎಂದರೆ ಮುಂದಾಳಾಗಿರುವವನು; ಪರಮಾತ್ಮನು ಈ ಅರ್ಥದಲ್ಲಿ ಅಗ್ನಿ ಗಿಂತಲೂ ಮುಖ್ಯಾರ್ಥದಲ್ಲಿಯೇ ಅಗ್ನಿಯಾಗಿರುತ್ತಾನೆ. ಆದ್ದರಿಂದ ಅಗ್ನಿಶರೀರಕನಾದ್ದರಿಂದ ಅಗ್ನಿ ಎಂದೇನೂ ಹೇಳಬೇಕಾದದ್ದಿಲ್ಲ.

(ಅರ್ಥ)

**೬೨. ಅಭಿವ್ಯಕ್ತಿಗಾಗಿ ಎಂದು ಆಶ್ಮರಥ್ಯನು.**

ಆದರೆ ಯಾವನು ಹೀಗೆ ಪ್ರಾದೇಶಮಾತ್ರನಾಗಿರುವ ಈ 'ಆತ್ಮನನ್ನು ಉಪಾಸನೆಮಾಡುತ್ತಾನೋ' (ಛಾಂ. ೫-೧೮-೧) ಎಂದು ಯಾವ ಪರಿಚ್ಛೇದವೂ ಇಲ್ಲದ (ಪರಮಾತ್ಮನು) ದ್ಯುಲೋಕವೇ ಮುಂತಾದವುಗಳಿಂದ ಪರಿಚ್ಛಿನ್ನನಾಗಿರುವನೆಂದು[1] ಹೇಳಿರುವದು ಉಪಾಸಕರಿಗೆ ಅಭಿವ್ಯಕ್ತಿಯಾಗುವದಕ್ಕಾಗಿ[2] ಎಂದು ಆಶ್ಮರಥ್ಯನು (ಅಭಿಪ್ರಾಯಪಡುತ್ತಾನೆ). ‖ ೩೦ ‖

## ೬೩. ಅನುಸ್ಮೃತೇರ್ಬಾದರಿಃ (೧-೨-೩೧)

(ಮೂಲ)

೭೧. ದ್ಯುಪ್ರಭೃತಿಪೃಥಿವ್ಯನ್ತಾನಾಂ ಮೂರ್ಧಾದಿಪಾದಾನ್ತಾವಯವತ್ವಕಲ್ಪನಂ ತಥಾನುಸ್ಮೃತ್ಯರ್ಥಂ ಬ್ರಹ್ಮಪ್ರತಿಪತ್ತಯೇ ಇತಿ ಬಾದರಿಃ ‖ ೩೧ ‖

(ಅರ್ಥ)

**೬೩. ಅನುಸ್ಮೃತಿಗಾಗಿ ಎಂದು ಬಾದರಿ.**

ದ್ಯುಲೋಕವೇ ಮುಂತಾಗಿ ಪೃಥಿವೀಪರ್ಯಂತವಾಗಿರುವವುಗಳನ್ನು ನೆತ್ತಿಯಿಂದ ಹಿಡಿದು ಪಾದದವರೆಗಿನ ಅವಯವಗಳಾಗಿ ಕಲ್ಪಿಸಿರುವದು[3] ಹಾಗೆಂದು ಅನುಸ್ಮೃತಿಯನ್ನು ಮಾಡುವದಕ್ಕೋಸ್ಕರ. ಬ್ರಹ್ಮವನ್ನು (ಹಾಗೆ) ಉಪಾಸನೆ ಮಾಡುವದಕ್ಕಾಗಿ ಎಂದು ಬಾದರಿಯು (ಅಭಿಪ್ರಾಯಪಡುತ್ತಾನೆ). ‖ ೩೧ ‖

## ೬೪. ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ (೧-೨-೩೨)

(ಮೂಲ)

೭೨. 'ಉರ ಏವ ವೇದಿರ್ಲೋಮಾನಿ ಬರ್ಹಿರ್ಹೃದಯಂ ಗಾರ್ಹಪತ್ಯಃ' (ಛಾಂ. ೫-೧೮-೨) ಇತ್ಯಾದಿನಾ ಉಪಾಸಕಹೃದಯಾದೀನಾಂ ವೇದ್ಯಾದಿತ್ವಕಲ್ಪನಂ ವಿದ್ಯಾಙ್ಗಭೂತಾಯಾಃ ಪ್ರಾಣಾಹುತೇರಗ್ನಿಹೋತ್ರತ್ವಸಂಪಾದನಾರ್ಥಂ ಇತಿ ಜೈಮಿನಿಃ । ದರ್ಶಯತಿ ಚ ಶ್ರುತಿಃ 'ಯ ಏತದೇವಂ ವಿದ್ವಾನಗ್ನಿಹೋತ್ರಂ ಜುಹೋತಿ' (ಛಾಂ. ೫-೨೪-೨) ಇತಿ । ಏತೇ ಪಕ್ಷಾಃ ಸ್ವೀಕೃತಾಃ । ಪೂಜಾರ್ಥಮ್ ಆಚಾರ್ಯಗ್ರಹಣಮ್ ‖ ೩೨ ‖

---

1. ದ್ಯುಲೋಕವೇ ಮುಂತಾದ ಪ್ರದೇಶಗಳಿಂದ ಪರಿಚ್ಛಿನ್ನನಾಗಿರುವನೆಂದು.
2. ಉಪಾಸಕರಿಗೆ ಬುದ್ಧಿಸೌಕರ್ಯವಾಗುವದಕ್ಕಾಗಿ ಎಂದರ್ಥ.
3. ನೆತ್ತಿ, ಕಣ್ಣು, ಪ್ರಾಣ, ಮಧ್ಯಶರೀರ, ವಸ್ತಿ, ಪಾದಗಳು— ಎಂದು ಇಲ್ಲಿ ಅವಯವಗಳನ್ನು ಹೇಳಿರುವದು.

(ಅರ್ಥ)

**೭೪. ಸಂಪತ್ತಿಗಾಗಿ ಎಂದು ಜೈಮಿನಿಯು. ಹಾಗೆಂದಲ್ಲವೆ, (ಶ್ರುತಿ) ತಿಳಿಸುತ್ತದೆ ?**

'ಎದೆಯೇ ವೇದಿಯು, ಲೋಮಗಳು ಬರ್ಹಿಸ್ಸು, ಹೃದಯವು ಗಾರ್ಹಪತ್ಯವು' (ಛಾಂ. ೫-೧೮-೨) ಎಂದು ಮುಂತಾಗಿರುವ (ವಾಕ್ಯ)ದಿಂದ ಉಪಾಸಕನ ಹೃದಯವೇ ಮುಂತಾದವುಗಳನ್ನು ವೇದಿಯೇ ಮುಂತಾದವುಗಳೆಂದು ಕಲ್ಪಿಸಿರುವದು (ಈ ವೈಶ್ವಾನರ)ವಿದ್ಯೆಗೆ ಅಂಗವಾಗಿರುವ ಪ್ರಾಣಾಹುತಿಯನ್ನು ಅಗ್ನಿಹೋತ್ರವೆಂದು ಸಂಪಾದನಮಾಡುವದಕ್ಕಾಗಿ[1] ಎಂದು ಜೈಮಿನಿಯು (ಅಭಿಪ್ರಾಯಪಡುತ್ತಾನೆ). ಶ್ರುತಿಯು 'ಯಾವನು ಹೀಗೆಂದು ಅರಿತುಕೊಂಡು ಈ ಅಗ್ನಿಹೋತ್ರವನ್ನು ಹೋಮಮಾಡುವನೋ' (ಛಾಂ. ೫-೨೪-೨) ಎಂದು (ಅಗ್ನಿಹೋತ್ರವನ್ನು) ಹೇಳಿಯೂ ಇದೆ. ಈ ಪಕ್ಷಗಳೆ(ಲ್ಲವನ್ನೂ) ಸ್ವೀಕರಿಸಿದೆ.[2] (ಆಯಾ) ಆಚಾರ್ಯರ (ಹೆಸರನ್ನು) ತೆಗೆದುಕೊಂಡಿರುವದು (ಅವರ) ಗೌರವಾರ್ಥವಾಗಿ. ॥ ೩೨ ॥

## ೭೫. ಆಮನನ್ತಿ ಚೈನಮಸ್ಮಿನ್ (೧-೨-೩೩)

(ಮೂಲ)

೭೩. ಏನಂ ಪರಮಾತ್ಮಾನಮ್ ಅಸ್ಮಿನ್ ಉಪಾಸಿತೃಶರೀರೇ ಪ್ರಾಣಾಹುತಿವೇಲಾಯಾಮ್ ಅನುಸಂಧಾನಾರ್ಥಂ 'ತಸ್ಯ ಹ ವಾ ಏತಸ್ಯ....ಮೂರ್ಧೈವ ಸುತೇಜಾಃ' (ಛಾಂ. ೫-೧೮-೨) ಇತ್ಯಾದಿ ಆಮನನ್ತಿ ಚ ; ಉಪಾಸಕಸ್ಯ ಮೂರ್ಧಾದಿರೇವಾಸ್ಯ ಪರಮಾತ್ಮನೋ ಮೂರ್ಧಾದಿರಿತ್ಯರ್ಥಃ ॥ ೩೩ ॥

(ಅರ್ಥ)

**೭೫. ಈತನನ್ನು ಈ (ಶರೀರದಲ್ಲಿ) ಪಠಿಸುತ್ತಲೂ ಇರುತ್ತಾರೆ.**

ಈ ಪರಮಾತ್ಮನನ್ನು ಈ ಉಪಾಸಕನ ಶರೀರದಲ್ಲಿ ಪ್ರಾಣಾಹುತಿವೇಳೆಯಲ್ಲಿ ಅನುಸಂಧಾನಮಾಡಲೆಂದು 'ಆ ಈ (ಆತ್ಮನ).....ಮೂರ್ಧವೇ ಸುತೇಜವು' (ಛಾಂ. ೫-೧೮-೨) ಎಂದು ಮುಂತಾಗಿ ಪಠಿಸುತ್ತಲೂ ಇರುತ್ತಾರೆ. (ಉಪಾಸಕನ) ನೆತ್ತಿ ಮುಂತಾದವುಗಳೇ ಪರಮಾತ್ಮನ ನೆತ್ತಿ ಮುಂತಾದವುಗಳು ಎಂದು (ಶ್ರುತಿಯ) ಅರ್ಥ. ॥ ೩೩ ॥

**ಇತಿ ಶ್ರೀಭಗವದ್ರಾಮಾನುಜವಿರಚಿತೇ ವೇದಾನ್ತಸಾರೇ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ**

---

1. ಆ ಭಾವನೆಯಿಂದ ಉಪಾಸನೆಮಾಡಬೇಕೆಂದು ತಿಳಿಸುವದಕ್ಕಾಗಿ.
2. ಅವು ಆಯಾ ಆಚಾರ್ಯರ ಮತಗಳು ಮಾತ್ರ ಎಂದು ತಿರಸ್ಕರಿಸಿಲ್ಲ.

# ಅಧ್ಯಾತ್ಮಪ್ರಕಾಶಕಾರ್ಯಾಲಯ

## ಹೊಳೆನರಸೀಪುರ

---

## ಈ ಕಾರ್ಯಾಲಯದಿಂದ ತಾವು ಯಾವಯಾವ ಲಾಭವನ್ನು ಪಡೆಯಬಹುದು?

೧. ಕಾರ್ಯಾಲಯದಲ್ಲಿ ನಡೆಯುತ್ತಿರುವ ಪೂಜೆ, ಭಜನೆ, ಪುರಾಣಶ್ರವಣ, ಉಪನ್ಯಾಸ, ಅನುಷ್ಠಾನಗಳು– ಇವುಗಳನ್ನು ನೋಡಿ ನಲಿಯಬಹುದು.

೨. ಕಾರ್ಯಾಲಯದಲ್ಲಿ ಪ್ರಕಟವಾಗುತ್ತಿರುವ ಅಮೂಲ್ಯವಾದ ಗ್ರಂಥಗಳನ್ನು ಕೊಂಡು ಓದಿ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳಬಹುದು.

೩. ಕಾರ್ಯಾಲಯದಲ್ಲಿರುವ 'ವಿದ್ಯಾನಿಲಯ'ಕ್ಕೆ ನಿಮ್ಮ ಕಡೆಯಲ್ಲಿರುವ ಬ್ರಾಹ್ಮಣ ವಿದ್ಯಾರ್ಥಿಗಳನ್ನು ಕಳುಹಿಸಿ ಅಧ್ಯಾತ್ಮವಿದ್ಯೆಯಲ್ಲಿ ಪ್ರವೀಣರನ್ನಾಗಿ ಮಾಡಿಸಿ, ಅವರಿಂದ ನಿಮ್ಮ ಪ್ರಾಂತದಲ್ಲಿ ವಿದ್ಯಾಪ್ರಸಾರವನ್ನು ಮಾಡಿಸಬಹುದು.

೪. ಕಾರ್ಯಾಲಯದಲ್ಲಿ ಪ್ರಕಟವಾಗುವ 'ಅಧ್ಯಾತ್ಮಪ್ರಕಾಶ'ಮಾಸಪತ್ರಿಕೆಗೆ ಚಂದಾದಾರರಾಗಿ ತಿಂಗಳುತಿಂಗಳಿಗೂ ಬಗೆಬಗೆಯ ಅಧ್ಯಾತ್ಮಬೋಧೆಯನ್ನು ಪಡೆಯಬಹುದು.

೫. ಕಾರ್ಯಾಲಯದಲ್ಲಿ ಸಿದ್ಧವಾಗುತ್ತಿರುವ ಪುಸ್ತಕಗಳ ಪ್ರಕಟನೆಗೆ ಯಥಾಶಕ್ತಿಯಾಗಿ ಧನಸಹಾಯವನ್ನು ಮಾಡಿ ಮಹಾಶ್ರಯದಾತರು, ಆಶ್ರಯದಾತರು, ಮಹಾಪೋಷಕರು ಅಥವಾ ಪೋಷಕರು ಎನಿಸಿ ಈ ಪ್ರಕಟನೆಗಳ ಪುಸ್ತಕಭಂಡಾರವೊಂದನ್ನು ಏರ್ಪಡಿಸಿಕೊಳ್ಳಬಹುದು.

೬. ಕಾರ್ಯಾಲಯದ ಕಟ್ಟಡಕ್ಕೂ, ವಿದ್ಯಾರ್ಥಿನಿಲಯಕ್ಕೂ, ಪೂಜಾಮಂದಿರಕ್ಕೂ ಯಥೋಚಿತವಾಗಿ ಸಹಾಯವನ್ನು ಮಾಡಿ ಪುಣ್ಯವನ್ನು ಸಂಪಾದಿಸಿಕೊಳ್ಳಬಹುದು.

# ಕೆಲವು ಪುಸ್ತಕಗಳು

---

**ವೇದಾಂತಸಾರ :** ಈಗ ತಮ್ಮ ಕೈಯಲ್ಲಿದೆ.

**ವೇದಾಂತದರ್ಶನ :** (ಬ್ರಹ್ಮಸೂತ್ರಗಳ ಮೊದಲನೆಯ ಪರಿಚಯ) ಸುಪ್ರಸಿದ್ಧರಾದ ಮೂವರು ಆಚಾರ್ಯರುಗಳ ವೇದಾಂತಸಿದ್ಧಾಂತವು ಹೇಗಿರುವದು ? ಎಂಬ ಪ್ರಶ್ನೆಗೆ ಉತ್ತರವು ವಾಚಕರಿಗೆ ಸ್ಥೂಲವಾಗಿ ತಿಳಿದಿರಲೆಂಬ ಆಶೆಯಿಂದ ಈ ಚಿಕ್ಕಪುಸ್ತಕವನ್ನು ಬರೆದಿದೆ. ವೇದಾಂತದರ್ಶನದ ಸಾರವನ್ನು ಶ್ರೀಶಂಕರಾಚಾರ್ಯರ ಅಭಿಪ್ರಾಯಕ್ಕನುಗುಣವಾಗಿ ವಿವರಿಸಿ ಪರಿಶಿಷ್ಟದಲ್ಲಿ ಶ್ರೀಮದ್ರಾಮಾನುಜಾಚಾರ್ಯರು, ಶ್ರೀಮನ್ಮಧ್ವಾಚಾರ್ಯರುಗಳ ಅಭಿಪ್ರಾಯವನ್ನೂ ಸಂಗ್ರಹವಾಗಿ ಪ್ರತಿಪಾದಿಸಿದೆ. ಪುಟಗಳು ೪೮.

**ಮುಕುಂದಮಾಲಾ :** (ತಿದ್ದಿದ ಎರಡನೆಯ ಸಂಸ್ಕರಣ) ಶ್ರೀಕುಲಶೇಖರಾಳ್ವಾರ್‌ರವರಿಂದ ವಿರಚಿತವಾದ ಈ ಭಕ್ತಿಪ್ರಧಾನಸ್ತೋತ್ರವು ವಿಷ್ಣುಭಕ್ತರಿಗೆಲ್ಲ ಪ್ರಿಯವಾಗಿರುತ್ತದೆ. ಇದನ್ನು ಪಾಠಾಂತರಸಮೇತವಾಗಿ ಭಾವಾರ್ಥವನ್ನು ಕೊಟ್ಟು ಅಚ್ಚುಮಾಡಿಸಿರುವದಲ್ಲದೆ ಬೊಂಬಾಯಿ ಕಡೆಯಲ್ಲಿರುವ ಪಾಠಕ್ರಮವನ್ನೂ ಬೇರೆಯಾಗಿ ಕೊಟ್ಟಿದೆ. ಪುಟಗಳು ೪+೨೩.

**ವೇದಾರ್ಥಸಂಗ್ರಹ :** ಶ್ರೀರಾಮಾನುಜಾಚಾರ್ಯರು ಪ್ರಸಿದ್ಧವಾದ ದಶೋಪನಿಷತ್ತುಗಳಿಗೆ ಪ್ರತ್ಯೇಕವಾಗಿ ಭಾಷ್ಯವನ್ನು ಬರೆದಿಲ್ಲವಾದರೂ ಉಪನಿಷತ್ಸಿದ್ಧಾಂತವನ್ನು ಸಂಗ್ರಹವಾಗಿ ತಿಳಿಸಲು ಈ ಗ್ರಂಥವನ್ನು ಬರೆದಿರುತ್ತಾರೆ. ಇದನ್ನು ಪೂರ್ಣವಾಗಿ ಮೂಲಸಮೇತವಾಗಿ ಕನ್ನಡದ ಅನುವಾದ, ಟಿಪ್ಪಣಿ, ಶಬ್ದಾನುಕ್ರಮಣಿಕೆ, ಪೀಠಿಕೆ– ಮುಂತಾದ ಸೌಕರ್ಯಗಳೊಡನೆ ಅಚ್ಚಿಗೆ ಸಿದ್ಧಗೊಳಿಸಿರುತ್ತದೆ. ಮಹಾಜನರ ಪ್ರೋತ್ಸಾಹದಿಂದ ಇದು ಪ್ರಕಟವಾಗಬೇಕಾಗಿದೆ.

ಪುಸ್ತಕಗಳ ಪೂರಾ ಬೆಲೆಪಟ್ಟಿಗೆ ಬರೆಮುಕೊಳ್ಳಿರಿ.

---

**ಕಾರ್ಯದರ್ಶಿ,**

ಅಧ್ಯಾತ್ಮಪ್ರಕಾಶಕಾರ್ಯಾಲಯ, ಹೊಳೆನರಸೀಪುರ.